# ಬಿನ್ನಹ

---

ಈ ಕಥೆಗಳು ಮುಖ್ಯವಾಗಿ ಮಕ್ಕಳಿಗೋಸ್ಕರ ಬರೆದುವು.

* * * * * * * *

ಈ ಕಥೆಗಳಲ್ಲಿ ಮೊದಲನೆಯ ಎರಡು ಜರ್ಮನೀ ದೇಶದಲ್ಲಿ ಇನ್ನೂರು ವರ್ಷಗಳ ಹಿಂದೆ ಇದ್ದ, ಪ್ರಸಿದ್ಧ "ಗ್ರಿಮ್" ಸಹೋದರರು ಸಂಗ್ರಹಿಸಿದ ಮೂಲವನ್ನು ಅನುಸರಿಸಿವೆ. ಮೂರನೆಯದು ಜಪಾನಿನಲ್ಲಿ ಪ್ರಚಾರದಲ್ಲಿದೆಯಂತೆ. ನಾಲ್ಕನೆಯದು ಪ್ರಸಿದ್ಧ ಆಂಗ್ಲೇಯ ಕವಿಯಾದ "ವಿಲಿಯಮ್ ಕೌಪರ"ನ ಕೃತಿಯೊಂದನ್ನು ಅವಲಂಬಿಸಿದೆ.

* * * * * * * *

ಸೆಪ್ಟಂಬರ್, ೧೯೧೧,
ಬೆಂಗಳೂರು.

ಡಿ. ವಿ. ಜಿ.

ನಲವತ್ತು ವರ್ಷಗಳಾದ ಮೇಲೆ ಅಲ್ಲಲ್ಲಿ ಕೊಂಚ ತಿದ್ದಿದೆ.

ಜನವರಿ ೨೦, ೧೯೫೧.

ಡಿ. ವಿ. ಜಿ.

## ವಿ ಷ ಯ ಸೂ ಚಿ ಕೆ



## ತಿ ದ್ದು ಪ ಡಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೧೫ | ೭ | ರಕ | ರಕ್ತ |
| ೧೮ | ೨೫ | ಹಿಡಿದು | ಬಡಿದು |
| ೨೧ | ೨೪ | ಮನಸು | ಮನಸ್ಸು |
| ೨೩ | ೨೭ | ಕುಡಿದದೂ | ಕುಡಿದದ್ದೂ |
| ೨೪ | ೧೦ | ತಳಿ | ತಳ್ಳಿ |
| ೨೬ | ೨೦ | ಒಳೆ | ಒಳ್ಳೆ |
| ೨೭ | ೧ ರಿಂದ ೬ | (ಈ ಒಟ್ಟು ಖಂಡವನ್ನು ಬಿಟ್ಟುಬಿಡತಕ್ಕದ್ದು) | |
| ೨೮ | ೪ | ಭಕ್ತಿ | ಭಕ್ತಿ ? |
| ೨೯ | ೧೩ | ರೆಲ್ಲರನೂ | ರೆಲ್ಲರನ್ನೂ |
| ,, | ೧೫ | ಪಡದೇ | ಪಡದೆ |
| ೩೬ | ೪ | ಧರಸಿ | ಧರಿಸಿ |
| ,, | ೨೦ | ಪ್ರಯೋಜನವನು | — ವನ್ನು |

# ಬೆ ಕ್ಕೋಜಿ

## ಬೆಕ್ಕೋಜಿಯ ಸಾಹಸಗಳು

ಬಿಸಿಲುಗಾಲದಲ್ಲಿ ಒಂದುದಿನ ಬೆಳಗಾದ ಕೊಂಚ ಹೊತ್ತಿನಮೇಲೆ ದರ್ಜಿ ಬೆಕ್ಕೋಜಿ ತನ್ನ ಅಂಗಡಿಯಲ್ಲಿ ನಗುಮುಖದಿಂದ ಕುಳಿತು ಬಲು ಚಟುವಟಿಕೆಯಿಂದ ಬಟ್ಟೆಗಳನ್ನು ಹೊಲಿಯುತ್ತಿದ್ದನು. ಆಗ ಆ ದಾರಿಯಲ್ಲಿ ಹಸಿರು ಸೀರೆಯನ್ನುಟ್ಟು, ಬಿಳಿಯ ಕುಪ್ಪಸವನ್ನು ತೊಟ್ಟು, ಕೆಂಪು ಮೂಗುತಿಯನ್ನಿಟ್ಟಿದ್ದ ಕರಿಯ ಬಣ್ಣದ ಕವಾಡಿಗಿತ್ತಿಯೊಬ್ಬಳು "ಮೊಸರು ಬೇಕೇ, ಮೊಸರೂ ?" ಎಂದು ಕೂಗಿಕೊಂಡು ಬಂದಳು. ಅವಳ ಇಂಪಾದ ದನಿಯನ್ನು ಕೇಳಿದ ಕೂಡಲೆ ಬೆಕ್ಕೋಜಿಯ ಕಿವಿಗಳು ಅರಳಿ ಅಗಲವಾದವು. ಅವನ ಬಾಯಲ್ಲಿ ನೀರೂರಲು ಮೊದಲಾಯಿತು. ಅವನು ಕಿಟಕಿಯಲ್ಲಿ ಬಗ್ಗಿ ಹೊರಗೆ ನೋಡಿ, "ಓ ಮೊಸರಿನವಳೇ, ಬೇಗ ಬಾ ಇಲ್ಲಿ ; ನಿನ್ನ ಮೊಸರನ್ನೆಲ್ಲ ನಾನೊಬ್ಬನೇ ತೆಗೆದುಕೊಳ್ಳುತ್ತೇನೆ" ಎಂದ.

ಕವಾಡಿಗಿತ್ತಿ ಬೆಕ್ಕೋಜಿಯ ಬಳಿಗೆ ಬಂದು, ತಲೆಯ ಮೇಲಿದ್ದ ಕುಕ್ಕೆಯನ್ನು ಕೆಳಕ್ಕಿಳಿಸಿ, ಮಡಕೆಯ ಮೇಲಿದ್ದ ಮುಚ್ಚಳವನ್ನು ತೆಗೆದಳು. ಬೆಳ್ಳಿಂಗಳಂತೆ ಬೆಳ್ಳಗೆ, ಒಂದೇ ಗಡ್ಡೆಯಾಗಿದ್ದ ಆ ಮೊಸರನ್ನು ಕಂಡೊಡನೆಯೆ ಬೆಕ್ಕೋಜಿಗೆ ಮತ್ತಷ್ಟು ಆಶೆ ಹೆಚ್ಚಿತು. ಪರೀಕ್ಷೆಗಾಗಿ ಸ್ವಲ್ಪ ಮೊಸರನ್ನು ಕೈಯಲ್ಲಿ ಹಾಕೆಂದು ಗೌಳಿಗಿತ್ತಿಯನ್ನು ಕೇಳಿದನು. ಅವಳು ಅಸಮಾಧಾನದಿಂದ ಮುಖವನ್ನು ಸೊಟ್ಟೆ ಮಾಡಿಕೊಂಡು, ಹಾಗ ಸಟ್ಟುಗದಷ್ಟು ಮೊಸರನ್ನು ಅವನ ಕೈಯಲ್ಲಿಟ್ಟಳು. ಅವನು ಅದನ್ನು ಸವಿದೊಡನೆಯೆ, "ಈ ಮೊಸರನ್ನು ತಿನ್ನದೆ ಬದುಕಿ ಪ್ರಯೋಜನವೇನು ?" ಎಂದಂದುಕೊಂಡು, "ಪಾವು ಮೊಸರು ಕೊಡು" ಎಂದನು. ಅವನು ಸೇರು ಮೊಸರಾದರೂ ತೆಗೆದುಕೊಳ್ಳುವನೆಂದು ಅಂದುಕೊಂಡಿದ್ದ ಆ

ಗೌಳಿಗಿತ್ತಿ ತುಂಬಾ ಅಸಮಾಧಾನ ಪಟ್ಟುಕೊಂಡು, ಅವನು ಕೇಳಿದಷ್ಟು ಕೊಟ್ಟು ಹೊರಟು ಹೋದಳು.

ಬೆಕ್ಕೋಜಿಗೆ ಹೆಂಡತಿ ಮಕ್ಕಳು ಯಾರೂ ಇರಲಿಲ್ಲ. ಅವನು ಬಡವನೆಂದು ಯಾರೂ ಅವನಿಗೆ ಹೆಣ್ಣು ಕೊಡಲೊಲ್ಲರು. ಅವನು ಒಬ್ಬಂಟಿಗನಾಗಿದ್ದುಕೊಂಡು, ಸಣ್ಣ ಪಣ್ಣ ಕೆಲಸಗಳನ್ನು ಮಾಡಿ ದಿನಕ್ಕೆ ನಾಲ್ಕಾರಾಣೆ ಸಂಪಾದಿಸುತ್ತಿದ್ದನು. ಅವನು ಮೊಸರು ತೆಗೆದುಕೊಂಡು "ಜಯ ವಿಠೋಬ ! ಈ ದಿನ ಒಳ್ಳೆಯ ಮೊಸರು ಸಿಕ್ಕಿತು. ಇದರೊಡನೆ ತಂಗಳು ಹಿಟ್ಟು ತಿಂದರೆ ಹೊಟ್ಟೆಯಲ್ಲಿ ತಂಪಾಗಿ, ಕೆಲಸ ಮಾಡಲು ಶಕ್ತಿಯೂ, ಉಲ್ಲಾಸವೂ ಹುಟ್ಟುವುವು," ಎಂದು ಹೇಳಿಕೊಳ್ಳುತ್ತಾ ಒಳಕ್ಕೆ ಹೋಗಿ, ಊಟದ ತಟ್ಟೆಯಲ್ಲಿ ತಂಗಳು ಹಿಟ್ಟನ್ನೂ ಅನ್ನವನ್ನೂ ಇಟ್ಟು, ಮೇಲೆ ಮೊಸರು ಸುರಿದು, ಆ ತಟ್ಟೆಯನ್ನು ಪಕ್ಕದಲ್ಲಿರಿಸಿಕೊಂಡು "ಈ ಅಂಗಿಯನ್ನು ಮುಗಿಸುವವರೆಗೂ ಒಂದು ತುತ್ತೂ ತಿನ್ನುವುದಿಲ್ಲ", ಎಂದು ನಿಶ್ಚಯ ಮಾಡಿಕೊಂಡು, ಬೇಗ ಬೇಗನೆ ಹೊಲಿಯುತ್ತಿದ್ದನು. ಅಷ್ಟರಲ್ಲಿಯೇ ನೊಣಗಳು ಗುಂಪು ಗುಂಪಾಗಿ ಬಂದು ಆ ತಟ್ಟೆಯಲ್ಲಿದ್ದದ್ದನ್ನು ಮುತ್ತಿದವು. ಬೆಕ್ಕೋಜಿಗೆ ಬಲು ಕೋಪ ಬಂತು. "ಹೋ ! ನಿಮ್ಮನ್ನಿಲ್ಲಿಗೆ ಕರೆದವರಾರು ?" ಎಂದು ಮಹಾರಾಷ್ಟ್ರಭಾಷೆಯಲ್ಲಿ ಅರಚಿಕೊಂಡನು. ಆದರೆ ನೊಣಗಳಿಗೆ ಆ ಭಾಷೆಯ ಪರಿಚಯುವೇ ಇಲ್ಲ ; ಅವು ಓಡಿಹೋಗದೆ, ಇನ್ನೂ ಹೆಚ್ಚು ಹೆಚ್ಚಾಗಿ ಬಂದು ಸೇರುತ್ತಿದ್ದವು. ಬೆಕ್ಕೋಜಿ ಈಗ ಕೋಪ ತಡೆಯಲಾರದೆ, ಹತ್ತಿರ ಬಿದ್ದಿದ್ದ ಒಂದು ಬಟ್ಟೆಯ ತುಂಡನ್ನು ತೆಗೆದುಕೊಂಡು, ತಟ್ಟೆಯಮೇಲೆ ಬಲವಾಗಿ ಬೀಸಿದನು. ನೊಣಗಳೆಲ್ಲಾ ಓಡಿಹೋದವು ; ಕೆಲವು ಮಾತ್ರ ಏಟಿಗೆಸಿಕ್ಕಿ ಬಟ್ಟೆಯಲ್ಲಿಯೇ ಪ್ರಾಣಬಿಟ್ಟವು. ಅದು ಬೆಕ್ಕೋಜಿಯ ಕಣ್ಣಿಗೆ ಬಿದ್ದಕೂಡಲೇ ಅವನು ಛಲ ತೀರಿತೆಂಬ ತೃಪ್ತಿಯಿಂದ ಅವುಗಳನ್ನೆಣಿಸಿ ನೋಡಲಾಗಿ, ಒಂದಲ್ಲ, ಎರಡಲ್ಲ, ಮೂರಲ್ಲ—ಏಳು ನೊಣಗಳು ಅಲ್ಲಿ ಸತ್ತು ಬಿದ್ದಿದ್ದವು! ಚಿಪ್ಪಿಗನು ತನ್ನ ಪರಾಕ್ರಮವನ್ನು ಕಂಡು ತಾನೇ ಆಶ್ಚರ್ಯಪಟ್ಟು, ಹಿಗ್ಗಿ, ಉಬ್ಬಿ, ಕುಣಿದಾಡಿ, ಕಡೆಗೆ "ನನ್ನ ಸಾಮರ್ಥ್ಯವನ್ನು ನನ್ನಷ್ಟಕ್ಕೇ

ಇಟ್ಟುಕೊಳ್ಳುವುದೇ ? ಇದು ಊರಿಲ್ಲರಿಗೂ ತಿಳಿಯಬೇಡವೆ ?— ಈ ಸಮಾಚಾರವನ್ನು ಈ ವೂರಲ್ಲೆಲ್ಲಾ—ಅಲ್ಲ, ಅಲ್ಲ,—ಈ ಪ್ರಪಂಚದ ಲ್ಲೆಲ್ಲಾ ಹರಡಬೇಕು " ಎಂದು ನಿಶ್ಚಯಿಸಿ, ಕೂಡಲೆ ಬಟ್ಟೆಯಲ್ಲಿ ಒಂದು ಪಟ್ಟಿಯನ್ನು ಕತ್ತರಿಸಿ, ಅದರ ಮೇಲೆ

"ಏಟೊಂದರಿಂದೆ
ಏಳ್ವರನ್ನು ಕೊಂದೆ "

ಎಂಬ ಮಾತುಗಳನ್ನು ದೊಡ್ಡ ದೊಡ್ಡ ಅಕ್ಷರಗಳಿಂದ ಹೊಲಿದು, ಅದನ್ನು ನೋಡಿ ಹಿಗ್ಗುತ್ತಾ, " ನನ್ನ ಪ್ರತಾಪವನ್ನು ಈವೂರಿನವರೂ, ಈ ನಾಡಿನವರೂ ಈ ಲೋಕದವರೂ ಎಲ್ಲರೂ ಹೊಗಳುವಂತೆ ಮಾಡು ತ್ತೇನೆ" ಎಂದು ಪುನಃ ಪುನಃ ಹೇಳಿಕೊಳ್ಳುತ್ತಾ, ಆ ಪಟ್ಟಿಯನ್ನು ನಡು ವಿಗೆ ಸುತ್ತಿಕೊಂಡು, ತನ್ನ ಚಿಕ್ಕ ಅಂಗಡಿಯನ್ನು ಬಿಟ್ಟು ದಿಗ್ವಿಜಯಕ್ಕಾಗಿ ಹೊರಡಲು ಉದ್ಯುಕ್ತನಾದನು. ಹೊರಡುವುದಕ್ಕೆ ಮುಂಚೆ ತಂಗಳೂಟ ವನ್ನುಂಡು, ಮನೆಯಲ್ಲೆಲ್ಲಾ ತನಗೆ ಉಪಯೋಗವಾಗುವ ಪದಾರ್ಥ ವೇನಾದರೂ ಇರಬಹುದೆಂದು ಹುಡುಕಿ ಯಾವುದನ್ನೂ ಕಾಣದೆ, ಕಡೆಗೆ ಒಂದು ಮಡಕೆಯಲ್ಲಿ ಎಷ್ಟು ದಿನದಿಂದಲೋ ಬಿದ್ದು ನಾತ ಬಡಿಯುತ್ತಿದ್ದ ಒಂದು ಬೆಣ್ಣೆಯ ಮುದ್ದೆಯನ್ನು ಕಂಡು, ಒಪ್ಪೊತ್ತಿನ ಊಟಕ್ಕಾದರೂ ಉಪಯೋಗಿಸಬಹುದೆಂದು ಅದನ್ನು ತೆಗೆದುಕೊಂಡು ಒಂದು ಎಲೆಯಲ್ಲಿ ಸುತ್ತಿ, ತನ್ನ ಅಂಗಿಯ ಜೇಬಿನಲ್ಲಿಟ್ಟುಕೊಂಡನು.

ಅವನಿಗೆ ಮಕ್ಕಳಿರಲಿಲ್ಲವಷ್ಟೆ? ತಂದೆ ತಾಯಿಗಳು ಮಕ್ಕಳಲ್ಲಿಟ್ಟಿ ರುವ ಪ್ರೀತಿಯನ್ನು ಅವನು ಗುಬ್ಬಚ್ಚಿ, ಬೆಕ್ಕು ಮುಂತಾದ ಪ್ರಾಣಿಗಳಲ್ಲಿ ಟ್ಟಿದ್ದನು. ಈ ಪ್ರಾಣಿಗಳು ಅವನಲ್ಲಿಗೆ ನಿರ್ಭಯವಾಗಿ ಬಂದು ಹೋಗು ತ್ತಿದ್ದವು. ಅವನು ಮನೆಯಲ್ಲಿ ಹುಡುಕಾಡುತ್ತಿದ್ದ ವೇಳೆಗೆ ಸರಿಯಾಗಿ ಅವನ ಅಂಗಳದೊಳಕ್ಕೆ ಎರಡು ಮೂರು ಗುಬ್ಬಚ್ಚಿಗಳು ಬಂದು ಇಳಿದವು. ಅವನು " ಇದೂ ಸಮಯದಲ್ಲಿ ಕೆಲಸಕ್ಕೆ ಬರಬಹುದು " ಎಂದಂದು ಕೊಂಡು, ಒಂದು ಗುಬ್ಬಚ್ಚಿಯನ್ನು ಹಿಡಿದು ಜೇಬಿನೊಳಕ್ಕೆ ಸೇರಿಸಿ, ಅದು ಹಾರಿ ಹೋಗದಂತೆ ಜೇಬಿನ ಮೂತಿಗೆ ಒಂದೆರಡು ಹೊಲಿಗೆಗಳನ್ನು

ಹಾಕಿ, ಇನ್ನು ತಡಮಾಡಲು ಇಷ್ಟವಿಲ್ಲದೆ, ಮನೆಗೂ ಅಂಗಡಿಗೂ ಬೀಗ ಹಾಕಿ, ಆತುರದಿಂದಲೂ ಜಂಭದಿಂದಲೂ ಹೊರಕ್ಕೆ ಹೊರಟನು.

ಎಲ್ಲಿಗೆ ಹೊರಟನೋ ಅವನಿಗೇ ತಿಳಿಯದು. ಹೋಗುತ್ತಾ ಹೋಗುತ್ತಾ ಒಂದು ದೊಡ್ಡ ಬೆಟ್ಟದ ಬಳಿಗೆ ಬಂದು, ಆ ಬೆಟ್ಟವನ್ನೇರಿದನು. ಅದರ ತುದಿಯನ್ನು ಸೇರುತ್ತಲೆ, ಅಲ್ಲಿ ಅದ್ಭುತಾಕಾರನಾದ ಒಬ್ಬ ರಾಕ್ಷಸನು ಕಾಣಿಸಲು ಅವನಿಗೆ ಕೈಮುಗಿದು " ನಮಸ್ಕಾರವಣ್ಣಾ ! ನಮಸ್ಕಾರ, ಪ್ರಪಂಚವೆಲ್ಲವೂ ನಿನ್ನ ಕಣ್ಣೆದಿರಿಗೇ ಇದೆ. ನಾನು ಲೋಕಕ್ಕೆ ನನ್ನ ಪರಾಕ್ರಮವನ್ನು ತೋರಿಸಬೇಕೆಂದು ಹೊರಟಿದ್ದೇನೆ. ನೀನೂ ನನ್ನೊಡನೆ ಬರುವೆಯಾ ? " ಎಂದು ಕೇಳಿದನು.

ರಾಕ್ಷಸನು ಈ ಚಿಪ್ಪಿಗನನ್ನು ಅವಮರ್ಯಾದೆಯಿಂದ ದೃಷ್ಟಿಸಿ, " ತುಚ್ಛ ಮನುಷ್ಯ, ನಿನಗೆಷ್ಟು ಗರ್ವ ? " ಎಂದು ಗದರಿಸಿದನು.

ಬೆಕ್ಕೋಜಿ ಆಗ " ಸ್ವಲ್ಪ ತಾಳು " ಎನ್ನುತ್ತಾ, ತನ್ನ ಅಂಗಿಯನ್ನು ಬಿಚ್ಚಿ, ಆ ರಕ್ಕಸನಿಗೆ ತನ್ನ ನಡುಕಟ್ಟನ್ನು ತೋರಿಸಿದನು.

ರಾಕ್ಷಸನು ಅದನ್ನು ಓದಿಕೊಂಡು, ಈ ಮನುಷ್ಯನು ಏಟೊಂದರಿಂದ ಏಳು ಜನರನ್ನು ಕೊಂದವನೆಂದು ತಿಳಿದು, ಅದರ ಮೇಲೆ ಬೆಕ್ಕೋಜಿಗೆ ಸ್ವಲ್ಪ ಮರ್ಯಾದೆ ತೋರಿಸಿ, ಅವನನ್ನು ನೋಡಿ—" ನಿನ್ನ ಬಲವನ್ನು ಪರೀಕ್ಷಿಸುತ್ತೇನೆ. ಇಲ್ಲಿ ನೋಡು,—ನೀನು ಹೀಗೆ ಮಾಡಬಲ್ಲೆಯಾ ? " ಎನ್ನುತ್ತಾ, ಕಲ್ಲೊಂದನ್ನು ಒಂದು ಕೈಯಲ್ಲಿ ಹಿಡಿದು ಹಿಸುಕಿದನು. ಆ ಕಲ್ಲಿನಿಂದ ನೀರು ತೊಟ್ಟು ತೊಟ್ಟುಗಳಾಗಿ ಬಂತು.

ಬೆಕ್ಕೋಜಿ " ಓಹೋ ! ಅದೇನು ಮಹದಾಶ್ಚರ್ಯ ! ನನಗದು ಎಳೆಯ ಮಕ್ಕಳ ಕೆಲಸ ! " ಎಂದು ಹೇಳಿ, ತನ್ನ ಅಂಗರೇಖೆಯ ಕೋಶದಲ್ಲಿದ್ದ ಬೆಣ್ಣೆಯ ಉಂಡೆಯನ್ನು ತೆಗೆದು ಹಿಸುಕಿದನು. ಆ ಉರಿ ಬಿಸಿಲಿನ ಕಾವಿನಿಂದ ನವನೀತವು ಮತ್ತಷ್ಟು ಸುಲಭವಾಗಿ ಕರಗಿ ಬೆಕ್ಕೋಜಿಯ ಕೈಯಿಂದ ಸೋರಿತು. ಅವನು ರಾಕ್ಷಸನನ್ನು ಕುರಿತು, " ಈಗೇನು ಹೇಳುತ್ತೀ ? " ಎಂದನು.

ರಾಕ್ಷಸನಿಗೆ ಏನು ಹೇಳುವುದಕ್ಕೂ ತೋರಲಿಲ್ಲ. ಆದರೂ ಈ ಚಿಪ್ಪಿಗನ ಶಕ್ತಿಯನ್ನು ಮತ್ತೊಂದು ರೀತಿ ಪರೀಕ್ಷಿಸಬೇಕೆಂದು ಒಂದು ಕಲ್ಲನ್ನು ತೆಗೆದುಕೊಂಡು ಮೇಲಕ್ಕೆಸೆದನು. ಅದು ಅಂತರಿಕ್ಷಕ್ಕೆ ಹೋಯಿತು; ಎಷ್ಟುದೂರ ಹೋಯಿತೋ ಯಾರಿಗೂ ಕಾಣಿಸಲಿಲ್ಲ.

ದರ್ಜಿ,—"ಅದು ಗಟ್ಟಿಗತನವೇ ಸರಿ; ಆದರೆ ನಿನ್ನ ಕಲ್ಲು ಎಲ್ಲಿಯಾದರೂ ಬೀಳಲೇ ಬೀಳುತ್ತದೆ. ಇದನ್ನು ನೋಡು" ಎಂದು ತನ್ನ ಕವಚದ ಜೇಬಿನೊಳಗಿದ್ದ ಗುಬ್ಬಚ್ಚಿಯನ್ನು ಈಚೆಗೆ ತೆಗೆದು ಹಾರಿಸಿದನು. ತನಗೆ ಸ್ವಾತಂತ್ರ್ಯ ದೊರಕಿತೆಂಬ ಸಂತೋಷದಿಂದ ಪಕ್ಷಿ ವೈಮರೆತು ಹಾರಿ ಬೇಗ ಅದೃಶ್ಯವಾಯಿತು. ದರ್ಜಿ "ಇನ್ನೇನು ಹೇಳುತ್ತೀ ?" ಎಂದನು.

ರಾಕ್ಷಸನು ಮನಸ್ಸಿನಲ್ಲಿ ಕಳವಳಗೊಂಡರೂ ಮೇಲೆ ಡಂಭವನ್ನು ತೋರಿ, "ಕಲ್ಲು ಬೀರುವುದರಲ್ಲಿ ನೀನು ಗಟ್ಟಿಗನೇ. ಆದರೆ ಭಾರವನ್ನು ಹೊರಲು ನಿನಗೆ ಯೋಗ್ಯತೆ ಇರಲಾರದು" ಎಂದು ಹೇಳಿ, ಸಮೀಪದಲ್ಲಿ ಬಿದ್ದಿದ್ದ ಒಂದು ಭಾರಿಯಾದ ಹುಣಿಸೆಯ ಮರದ ಬಳಿಗೆ ಬೆಕ್ಕೋಜಿಯನ್ನು ಕರೆದುಕೊಂಡು ಹೋಗಿ, "ನೀನು ನಿಜವಾಗಿಯೂ ಬಲಿಷ್ಠನಾದರೆ ಈ ಮರವನ್ನೆತ್ತಿಕೊಂಡು ಹೋಗುವುದರಲ್ಲಿ ನನಗೆ ಸಹಾಯನಾಗು." ಎಂದನು. ಅದಕ್ಕೆ ಬೆಕ್ಕೋಜಿ "ಅಗತ್ಯವಾಗಿ ಆಗಲಿ, ನೀನು ಬುಡವನ್ನೆತ್ತಿಕೋ ; ನಾನು ಭಾರವಾದ ಕೊಂಬೆಗಳನ್ನೆತ್ತಿಕೊಳ್ಳುತ್ತೇನೆ." ಎಂದು ಹೇಳಿದನು.

ರಾಕ್ಷಸನು ಮರದ ಬುಡವನ್ನೆತ್ತಿ ತನ್ನಭುಜದ ಮೇಲಿಟ್ಟುಕೊಂಡನು. ಉಪಾಯಗಾರನಾದ ದರ್ಜಿ ಮರದ ಶಾಖೋಪಶಾಖೆಗಳ ಮಧ್ಯದಲ್ಲಿ ಒಂದು ಕೊಂಬೆಯ ಮೇಲೆ ಯಾರಿಗೂ ಕಾಣಿಸದಂತೆ ಕುಳಿತುಕೊಂಡನು. ರಾಕ್ಷಸನು ಪ್ರಯಾಸದಿಂದ ಮರವನ್ನೆಳೆದುಕೊಂಡು ಹೊರಟನು. ದರ್ಜಿಯು ಆನಂದದಿಂದ ಗಟ್ಟಿಯಾಗಿ ಹಾಡಲಾರಂಭಿಸಿದನು. ರಾಕ್ಷಸ ಈ ಬೆಕ್ಕೋಜಿಗೆ ಯಾವುದೂ ಕಷ್ಟವಲ್ಲವೆಂದು ಮನಸ್ಸಿನಲ್ಲಿ ದೃಢ ಮಾಡಿಕೊಂಡನು.

ಸ್ವಲ್ಪ ದೂರ ಹೋದಮೇಲೆ ರಾಕ್ಷಸನು ತುಂಬಾ ಆಯಾಸಪಟ್ಟವನಾಗಿ, "ಅಯ್ಯಯ್ಯೋ ! ಇನ್ನು ನಾನು ನಡೆಯಲಾರೆ. ಈ ಭಾರವನ್ನು ಕೆಳಕ್ಕೆ ಹಾಕಿಬಿಡುತ್ತೇನೆ." ಎಂದು ಕೂಗಿಕೊಂಡನು.

ಬೆಕ್ಕೋಜಿ ಜಾಗರೂಕನಾಗಿ ಬೇಗ ಕೆಳಕ್ಕಿಳಿದು, ರಾಕ್ಷಸನು ಹಿಂದಿರುಗಿ ನೋಡುವ ವೇಳೆಗೆ ಒಂದು ಕೊಂಬೆಯನ್ನು ಎರಡು ಕೈಗಳಿಂದಲೂ ಹಿಡಿದುಕೊಂಡು, "ನಿನಗೆಲ್ಲಿಯದು ಈ ಮರವನ್ನು ಹೊರುವಷ್ಟು ಬಲ ?" ಎಂದು ಹೀಯಾಳಿಸಿದನು.

ಅಲ್ಲಿಂದ ಅವರು ಒಂದು ನೇರಿಳೆಯ ಮರದ ಬಳಿಗೆ ಹೋದರು. ರಾಕ್ಷಸ ಎತ್ತರದಲ್ಲಿದ್ದ ಒಂದು ಕೊಂಬೆಯನ್ನು ಹಿಡಿದು ಬಗ್ಗಿಸಿ ಬೆಕ್ಕೋಜಿಯ ಕೈಗೆ ಕೊಟ್ಟು, "ಇದರ ಮೇಲಿರುವ ಹಣ್ಣುಗಳನ್ನು ಬಿಡಿಸು" ಎಂದನು. ಬೆಕ್ಕೋಜಿಗೆ ಅದನ್ನು ಹಿಡಿದುಕೊಳ್ಳುವ ಮಟ್ಟಿಗೆ ಬಲವಿರಲಿಲ್ಲ. ಕೊಂಬೆ ಚಂಗನೆ ಹಾರಿತು. ಅದನ್ನು ಹಿಡಿದಿದ್ದವನೂ ಅದರೊಡನೆ ಹಾರಿ ಮರದ ಮತ್ತೊಂದು ಕಡೆ ಬಿದ್ದನು.

ರಾಕ್ಷಸ, "ಏನು ! ಇಷ್ಟೇನೆ ನಿನ್ನ ಬಲ ? ಈ ಕಡ್ಡಿಯನ್ನು ಹಿಡಿಯುವುದು ನಿನ್ನಿಂದಾಗದೆ ?" ಎಂದನು.

ಬೆಕ್ಕೋಜಿ, "ನೀನು ತಿಳಿದುಕೊಂಡಿರುವುದು ಹಾಗೆ. ಒಂದೇ ಏಟನಿಂದ ಏಳ್ವರನ್ನು ಕೊಂದವನಿಗೆ ಅದೊಂದು ಮಿಂಚಿದ ಕೆಲಸವೋ ? ಪಕ್ಕದ ಕಾಡಿನಲ್ಲಿ ಕೆಲವರು ಬೇಟೆಯಾಡುತ್ತಿದ್ದಾರೆ. ಅದನ್ನು ನೋಡುವುದಕ್ಕೋಸ್ಕರ ನಾನು ಹಾಗೆ ಹಾರಿದೆ. ಎಲ್ಲಿ,—ನೀನು ಹಾರು ನೋಡೋಣ." ಎಂದನು.

ರಾಕ್ಷಸ ಎಷ್ಟೆಷ್ಟೋ ಪ್ರಯತ್ನಪಟ್ಟನು. ಅವನ ದೊಡ್ಡ ದೊಡ್ಡ ಕೈ ಕಾಲುಗಳು ಮರದ ರೆಂಬೆಗಳಲ್ಲಿ ಸಿಕ್ಕಿಬಿದ್ದವೇ ಹೊರತು, ಅವನಿಂದ ಹಾರುವುದಾಗಲಿಲ್ಲ. ಇದರಿಂದ ಅವನಿಗೆ ಬೆಕ್ಕೋಜಿಯ ಸಾಹಸದಲ್ಲಿ ನಂಬಿಕೆ ಮತ್ತಷ್ಟು ಹೆಚ್ಚಿತು.

ಅವನು ಬೆಕ್ಕೋಜಿಯನ್ನು ಕುರಿತು, "ಎಲೋ, ನೀನು ಬಲು ಶಕ್ತಿವಂತ. ನನ್ನ ಗುಹೆಗೆ ಬಂದು ಈ ರಾತ್ರಿ ಇದ್ದುಹೋಗು." ಎಂದು ಕೇಳಿಕೊಂಡನು. ಬೆಕ್ಕೋಜಿ ಸಂತೋಷದಿಂದ ಒಪ್ಪಿ ಅವನ ಹಿಂದೆ ಹೋದನು. ಅವರು ಗುಹೆಯನ್ನು ಸೇರಿದಾಗ, ಅಲ್ಲಿ ಅದ್ಭುತರೂಪದ ರಾಕ್ಷಸರು ಇನ್ನಿಬ್ಬರು ದೊಡ್ಡದಾಗಿ ಬೆಂಕಿ ಮಾಡಿ ಅದರಲ್ಲಿ ಕೆಲವು ಕಾಡು ಮೃಗಗಳನ್ನು

ಚೇಯಿಸುತ್ತಿದ್ದರು. ಬೆಕ್ಕೋಜಿಗೆ ಅದನ್ನು ನೋಡಿ ಭಯವಾಯಿತು; ಆಶ್ಚರ್ಯವೂ ಆಯಿತು. ಅವನನ್ನು ಕರೆತಂದ ರಾಕ್ಷಸನು ಅವನಿಗೆ ಮಲಗಲು ಒಂದು ಮೂಲೆಯಲ್ಲಿ ದೊಡ್ಡ ಹಾಸಿಗೆಯನ್ನು ಹಾಸಿಕೊಟ್ಟನು. ಬೆಕ್ಕೋಜಿ ಅದರ ಮೇಲೆ ಮಲಗಿ, ಅದು ವಿಪರೀತ ವಿಸ್ತಾರವಾಗಿದ್ದ ಕಾರಣ, ಹೊರಳಿ ಹೊರಳಿ ಒಂದು ಮೂಲೆಗೆ ಬಂದು, ಕೈ ಕಾಲು ಮುದುರಿ ಕೊಂಡು ನಿದ್ರೆ ಮಾಡಿದನು. ಅರ್ಧರಾತ್ರಿಯ ಕತ್ತಲೆಯಲ್ಲಿ ರಾಕ್ಷಸ ಎದ್ದು ಬಂದು, ತನ್ನ ಅತಿಥಿ ನಿದ್ರಿಸಿದಾನೆಂದು ತಿಳಿದು, ಒಂದು ದೊಡ್ಡ ಕತ್ತಿಯನ್ನು ತಂದು ಹಾಸಿಗೆಯ ಮಧ್ಯದಲ್ಲಿ ಬಲವಾಗಿ ಪೆಟ್ಟಿಕ್ಕಿದನು. ಶಯ್ಯೆ ಎರಡು ತುಂಡಾಯಿತು. ರಾಕ್ಷಸನು ತನ್ನ ಪ್ರತಿಕಕ್ಷಿಯು ಹತನಾದ ನೆಂದು ನೆಚ್ಚಿಕೊಂಡು ಸಮಾಧಾನದಿಂದ ನಿದ್ರಿಸಿದನು.

ಬೆಳಗಾಗುತಲೇ ರಾಕ್ಷಸರು ಎಂದಿನಂತೆ ಹೊರಹೊರಟು, ತಮ ಗಿಂತ ಶಕ್ತನಾಗಿದ್ದ ಆ ತಂತ್ರಗಾರ ನಾಶನಾದನೆಂದು ನಿರ್ಭೀತರಾಗಿ ತಿರುಗುತ್ತಿದ್ದರು. ಆಗ ಬೆಕ್ಕೋಜಿ ನಗುನಗುತ ಅವರಿಗಿದಿರಾಗಿ ಹೋ ದನು. ರಾಕ್ಷಸರು ಅವನು ಪುನಃ ಬದುಕಿ ಬಂದನೆಂದು ತಿಳಿದರು. ಏಳು ಜನರನ್ನು ಒಂದೇ ಏಟಿನಿಂದ ಕೊಂದ ಶೂರ ತಮ್ಮ ಪಾಲಿಗೆ ಯಮನೇ ಸರಿ ಎಂದು ನಿಶ್ಚಯಿಸಿ, ಅವರು ತಮ್ಮ ಕಾಲಿಗೆ ಬುದ್ಧಿ ಹೇಳಿ ಬೇಗನೆ ಅಗೋಚರರಾದರು.

ಬೆಕ್ಕೋಜಿ ಆನಂದಭರಿತನಾಗಿ ಮುಂದಕ್ಕೆ ಪ್ರಯಾಣ ಬೆಳೆಸಿ, ತನ್ನ ಮೂಗಿಗೆ ನೇರವಾಗಿ ನಡೆದನು. ಬಹುದೂರ ನಡೆದ ಮೇಲೆ ಒಂದು ದೊಡ್ಡ ಪಟ್ಟಣವನ್ನು ಸೇರಿ, ಅಲ್ಲಿ ದೊರೆಯ ಅರಮನೆಯ ಮುಂದುಗಡೆ ಉದ್ಯಾನವನದಲ್ಲಿ ಹುಲ್ಲಿನ ಮೇಲೆ ಮರದ ನೆರಳಿನಲ್ಲಿ ಆಯಾಸ ಪರಿಹಾರ ಕ್ಕಾಗಿ ವಿಶ್ರಮಿಸಿಕೊಂಡನು. ಅವನು ಗಾಢನಿದ್ರೆಯಲ್ಲಿದ್ದಾಗ ಆ ಊರಿನ ವರು ಕೆಲವರು ಆ ದಾರಿಯಲ್ಲಿ ಹೋಗುತ್ತಾ ಅವನ ನಡುಕಟ್ಟಿನ ಮೇಲಿದ್ದ ಮಾತುಗಳನ್ನು ಓದಿನೋಡಿ ಬೆರಗಾಗಿ, "ಆಹಾ! ಇವನೆಂತಹ ಮಹಾ ಶೂರನಿರಬಹುದು! ಇವನಿಗೆ ಈ ರಾಜ್ಯದಲ್ಲೇನೂ ಕೆಲಸವಿಲ್ಲವಲ್ಲಾ" ಎಂದುಕೊಂಡು, ದೊರೆಯ ಬಳಿಗೆ ಹೋಗಿ, ತಾವು ಕಂಡ ರಣಧೀರನ

ಸಂಗತಿಯನ್ನು ಬಿನ್ನಯಿಸಿ, ಯುದ್ಧಕಾಲದಲ್ಲಿ ರಾಜನಿಗೆ ಅವನಿಂದ ತುಂಬಾ ಪ್ರಯೋಜನವಾದೀತೆಂದು ಸೂಚಿಸಿದರು.

ಅರಸು ಅವರ ತಾತ್ಪರ್ಯವನ್ನು ಗ್ರಹಿಸಿ, ಅವನನ್ನು ಕರೆತರಲು ಒಬ್ಬ ಭೃತ್ಯನನ್ನು ಕಳುಹಿದನು. ಭೃತ್ಯನು ಬೆಕ್ಕೋಜಿಯಿದ್ದೆಡೆಗೆ ಬಂದು, ಬಹಳ ಹೊತ್ತು ಕಾದಿದ್ದಮೇಲೆ, ಅವನೆಚ್ಚತ್ತು, ಕಣ್ಣುಗಳನ್ನುಜ್ಜಿಕೊಂಡು, ಕೈಕಾಲುಗಳನ್ನೊದರಿ ಮೇಲಕ್ಕೆದ್ದನು. ಕೂಡಲೇ ರಾಜದೂತನು ರಾಜಾಜ್ಞೆಯನ್ನು ತಿಳಿಸಿದನು. ಬೆಕ್ಕೋಜಿ ಅದಕ್ಕೆ ಸಮ್ಮತಿಸಿ ಅವನೊಡನೆ ರಾಜಾಸ್ಥಾನಕ್ಕೆ ತೆರಳಿದನು. ಅಲ್ಲಿ ಅವನಿಗೆ ವಿಶೇಷ ಸನ್ಮಾನಗಳು ನಡೆದವು. ಅರಸು ಅವನನ್ನು ಒಬ್ಬ ಸೇನಾಧಿಪತಿಯಾಗಿ ನಿಯಮಿಸಿದನು. ಅವನಿಗೆ ವಾಸಮಾಡಲು ದಿವ್ಯ ಭವನವೊಂದು ಏರ್ಪಾಟಾಯಿತು.

ಆದರೆ ಆ ರಾಜನ ಬಳಿ ಮೊದಲಿನಿಂದಲೂ ಇದ್ದ ಸೈನಿಕರಿಗೆ ಈ ಹೊಸಬನಲ್ಲಿ ಹೊಟ್ಟೆಕಿಚ್ಚು ಹುಟ್ಟಿತು. "ಇವನನ್ನು ಓಡಿಸುವ ಬಗೆ ಹೇಗೆ? ವ್ಯಾಜ್ಯವಾಡೋಣವೆಂದರೆ, ಇವನು ಏಳು ಮಂದಿಯನ್ನು ಒಂದೇ ಏಟಿಗೆ ಮಲಗಿಸುವ ಶೂರ. ಇವನನ್ನು ಕೆಣಕಿದರೆ ನಮ್ಮ ಗತಿಯೇನು ?" ಎಂದು ಅವರು ಮಾತನಾಡಿಕೊಂಡು, ಕಡೆಗೆ ಎಲ್ಲರೂ ಸೇರಿ,—ಏಟೊಂದರಿಂದ ಏಳ್ವರನ್ನು ಕೊಂದವನೊಡನೆ ಉದ್ಯೋಗ ಮಾಡಲು ತಮಗೆ ಯೋಗ್ಯತೆ ಸಾಲದೆಂದೂ, ಆದಕಾರಣ ತಾವು ಕೆಲಸದಿಂದ ನಿವೃತ್ತರಾಗುವವರೆಂದೂ ರಾಜನಿಗೆ ಬರೆದುಕೊಂಡರು. ಒಬ್ಬ ಹೊಸಬನಿಗಾಗಿ ಹಳಬರೂ ನಂಬಿಕಸ್ತರೂ ಆದ ಅನೇಕರನ್ನು ಕಳೆದುಕೊಳ್ಳಲು ಅರಸು ಇಷ್ಟಪಡದೆ, ಬೆಕ್ಕೋಜಿಯನ್ನು ಹೇಗಾದರೂ ಮಾಡಿ ಕಳುಹಿಸಿಬಿಡಬೇಕೆಂದು ತೀರ್ಮಾನಿಸಿಕೊಂಡನು.

ಮಹಾಶೂರನ ಸಹವಾಸವನ್ನು ತಪ್ಪಿಸಿಕೊಳ್ಳುವುದು ಹೇಗೆ ? ಅವನನ್ನು ರೇಗಿಸಿದರೆ ಅವನು ಎಲ್ಲರನ್ನೂ ಸಂಹರಿಸಿ ಸಿಂಹಾಸನವನ್ನು ತಾನೇ ಆಕ್ರಮಿಸಿಕೊಂಡಾನು ! ಏನುಮಾಡುವುದು? ರಾಜನು ಅನೇಕ ದಿನ ಯೋಚಿಸಿ, ಕಡೆಗೆ ಒಂದುದಿನ ಬೆಕ್ಕೋಜಿಯನ್ನು ಕರೆಯಿಸಿ ಹೀಗೆಂದನು :—
" ಎಲೆ ಗಂಡರ ಗಂಡ ! ಇಲ್ಲಿಗೆ ಕೊಂಚ ದೂರದಲ್ಲೊಂದು ಅಡವಿಯಿದೆ.

ಅಲ್ಲಿಬ್ಬರು ರಾಕ್ಷಸರಿದ್ದಾರೆ. ಅವರ ಹಾವಳಿ ಹೇಳತೀರದು. ಅವರಿಂದ ನನ್ನ ಜನರಿಗೆ ತುಂಬಾ ಬಾಧೆಯಾಗಿದೆ. ನೀನು ಹೋಗಿ ಅವರನ್ನು ಸೋಲಿಸಿ, ಸಾಯಿಸಿ ಬಂದರೆ, ನನಗಿರುವ ಒಬ್ಬ ಮಗಳನ್ನೂ, ನನ್ನ ರಾಜ್ಯದಲ್ಲಿ ಅರ್ಧವನ್ನೂ ನಿನಗೆ ಕೊಟ್ಟುಬಿಡುತ್ತೇನೆ. ನೋಡು ; ನಿನಗೆ ಸಹಾಯವಾಗಿ ೧೦೦ ಮಂದಿ ಸೈನಿಕರನ್ನು ಕಳುಹಿಸುತ್ತೇನೆ.''

ಈ ಮಾತನ್ನು ಬೆಕ್ಕೋಜಿ ಕೇಳಿ, ತಡಮಾಡದೆ, "ಅಪ್ಪಣೆಯಂತೆ, ಮಹಾಸ್ವಾಮಿ. ಆದರೆ ನೂರುಮಂದಿ ಸೈನಿಕರು ನನಗೇಕೆ ? ಏಳ್ವರನ್ನು ಒಂದೇ ಏಟಿಗೆ ಕೊಂದವನು ಇಬ್ಬರಿಂದ ಸೋತಾನೆ ?" ಎಂದು ಉತ್ತರ ಕೊಟ್ಟನು. ಹೀಗೆಂದು ಹೇಳಿ ಅವನು ಅಡವಿಗೆ ಹೊರಟನು. ನೂರುಮಂದಿ ಸೈನಿಕರೂ ಹಿಂದೆ ಹೋದರು. ಅವರನ್ನು ಅವನು ಕಾಡ ಹೊರಭಾಗದಲ್ಲಿಯೇ ಬಿಟ್ಟು, ತಾನೊಬ್ಬನೇ ರಾಕ್ಷಸರನ್ನು ಹುಡುಕಿಕೊಂಡು ಹೊರಟನು. ಅಡವಿಯ ಮಧ್ಯಭಾಗದಲ್ಲಿ ಅವರು ಒಂದು ದೊಡ್ಡ ಮರದಕೆಳಗೆ ಬಿದ್ದು ನಿದ್ರಿಸುತ್ತಿದ್ದರು. ಅವರು ಗಟ್ಟಿಯಾಗಿ ಗೊರಕೆ ಇಡುತ್ತಿದ್ದುದರಿಂದ ಆ ಶಬ್ದಕ್ಕೆ ಸ್ವಲ್ಪ ದೂರದಲ್ಲಿದ್ದ ಗುಡ್ಡದಲ್ಲಿ ಪ್ರತಿಧ್ವನಿಯಾಗುತ್ತಿತ್ತು; ಅಲ್ಲಿದ್ದ ಮರಗಳ ಕೊಂಬೆಗಳು ಅಲ್ಲಾಡುತ್ತಿದ್ದವು.

ಬೆಕ್ಕೋಜಿ ಸುಮ್ಮನೆ ಹೊತ್ತು ಕಳೆಯಲಿಲ್ಲ. ಬೇಗ ಕೆಲವು ಕಲ್ಲುಗಳನ್ನಾರಿಸಿ ತನ್ನ ಅಂಗಿಯ ಕೋಶಗಳಲ್ಲಿಟ್ಟುಕೊಂಡು, ವೃಕ್ಷದ ಮೇಲೇರಿ ಶಾಖೆಗಳ ಮಧ್ಯದಲ್ಲಿ ಕಣ್ಣಿಗೆ ಬೀಳದಂತೆ ಕುಳಿತು, ಕಲ್ಲುಗಳನ್ನು ಒಂದೊಂದಾಗಿ ಒಬ್ಬ ರಾಕ್ಷಸನ ಎದೆಯ ಮೇಲಕ್ಕೆ ಬಿಡುತ್ತಾ ಬಂದನು. ಹೀಗೆ ರಾಕ್ಷಸನಿಗೆ ನಿದ್ರಾಭಂಗಮಾಡಲು ಬಹಳ ಹೊತ್ತಾಯಿತು. ಕಡೆಗೆ ಅವನೆದ್ದು ಪಕ್ಕದಲ್ಲಿದ್ದ ರಾಕ್ಷಸನನ್ನು ತಳ್ಳಿ, "ಇದೇನು ಹುಡುಗಾಟ ? ಅದೇಕೆ ನನ್ನನ್ನು ಹೊಡೆಯುತ್ತಿ" ಎಂದು ಅರಚಿದನು. ಮತ್ತೊಬ್ಬನು "ನಿನಗೇನು ಕನಸೋ ? ನಿನ್ನನ್ನು ನಾನು ಮುಟ್ಟಲೇ ಇಲ್ಲ." ಎಂದನು. ಪುನಃ ಇಬ್ಬರೂ ನಿದ್ರಾದೇವಿಯ ಮಡಿಲನ್ನು ಸೇರಿದರು.

ಬೆಕ್ಕೋಜಿ ಮರದಿಂದಿಳಿದು ಮರಳಿ ಕೆಲವು ದೊಡ್ಡದೊಡ್ಡ ಕಲ್ಲುಗಳನ್ನು ಹುಡುಕಿ ಸಂಪಾದಿಸಿ, ಹಿಂದಿನಂತೆಯೇ ಅವುಗಳನ್ನು ಆ ಎರಡ

ನೆಯ ರಾಕ್ಷಸನ ಎದೆಯಮೇಲೆ ಒಂದೊಂದಾಗಿ ಹಾಕಿದನು. ಇಪ್ಪತ್ತು ಕಲ್ಲು ತಗಲಿದ ಮೇಲೆ ಅವನೂ ಕೋಪದಿಂದೆದ್ದು, ಮೊದಲನೆಯವನನ್ನು ನೂಕಿ, "ನೀನೇಕೆ ಈಗ ನನ್ನನ್ನು ಹೊಡೆಯುತ್ತಿದ್ದಿ ? ಇದೇನು ಒರಟಾಟ ?" ಎಂದು ಗರ್ಜಿಸಿದನು. ಮೊದಲನೆಯವನು "ನಿನ್ನನ್ನು ನಾನು ಹೊಡೆಯಲೇ ಇಲ್ಲ" ಎಂದು ಅರಚಿದನು.

ಹೀಗೆ ಸ್ವಲ್ಪಹೊತ್ತು ಜಗಳವಾಡಿ ಬೇಸತ್ತನಂತರ ಇಬ್ಬರೂ ನಿದ್ರಾಪರವಶರಾದರು. ಬೆಕ್ಕೋಜಿ ಯಥಾಪ್ರಕಾರ ತನ್ನ ಕೆಲಸವನ್ನು ನಡಸಿದನು; ಅಲ್ಲಿದ್ದ ಕಲ್ಲುಗಳಲ್ಲೆಲ್ಲಾ ಬಲು ದೊಡ್ಡದನ್ನು ತೆಗೆದು ಮೊದಲನೆಯ ರಾಕ್ಷಸನ ಎದೆಯ ಮೇಲಕ್ಕೆ ಬಿಟ್ಟನು. ಅವನು ಈಸಲ ಕೋಪದಿಂದ ಮೇಲಕ್ಕೆದ್ದು, "ಇನ್ನು ನಾನು ಸುಮ್ಮನಿರಲಾರೆ" ಎಂದು ಹೂಂಕರಿಸುತ್ತಾ ತನ್ನ ಸಹವಾಸಿಯನ್ನು ಬಲವಾಗಿ ಒದ್ದನು. ಅವನು ಪಕ್ಕದಲ್ಲಿದ್ದ ಮರದಮೇಲೆ ಬೀಳಲು ಆ ಮರವೆಲ್ಲವೂ ಕಂಪಿಸಿತು. ಆ ಎರಡನೆಯವನು ಚೇತರಿಸಿಕೊಂಡು ಮೊದಲನೆಯವನನ್ನು ಒದ್ದನು. ಇಬ್ಬರಿಗೂ ಗುದ್ದಾಟ ಮೊದಲಾಯಿತು. ಅವರು ಅಲ್ಲಿದ್ದ ಮರಗಳನ್ನು ಕಿತ್ತು ಬಂಡೆಗಳನ್ನೆತ್ತಿ ಹೊಡೆದಾಡಿದರು. ಆ ರಭಸದಿಂದ ಭೂಮಿಯೂ ನಡುಗಿತು. ಈ ದ್ವಂದ್ವ ಯುದ್ಧದಿಂದ ಬೆಕ್ಕೋಜಿಯ ರೊಟ್ಟಿ ತುಪ್ಪದಲ್ಲಿ ಬಿತ್ತು. ರಾಕ್ಷಸರು ತಮ್ಮ ಕೈಯಿಂದ ತಾವೇ ಮಡಿದು ಮಲಗಿದರು.

ಬೆಕ್ಕೋಜಿ ಸಂತೋಷದಿಂದುಬ್ಬಿ, ಮರದಿಂದ ಕೆಳಕ್ಕೆ ಹಾರಿ, "ಜಯ ವಿಠೋಬ ! ಇನ್ನು ನನ್ನ ಕೆಲಸ ನೆರವೇರಿತು : ನಿನ್ನ ದಯೆಯಿಂದ ಈ ರಾಕ್ಷಸರು ನಾನಿದ್ದ ಮರವನ್ನು ಕೀಳಲಿಲ್ಲ. ಅವರು ಹಾಗೆ ಮಾಡಿದ್ದರೆ ನಾನೆಲ್ಲಿರುತ್ತಿದ್ದೆ?" ಎಂದು ಹೇಳಿಕೊಂಡನು. ಹಾಗೆ ಹೇಳುತ್ತಾ ತನ್ನ ಕೈಯಲ್ಲಿದ್ದ ಕತ್ತಿಯಿಂದ ಆ ರಕ್ಕಸರ ಮೈ ಮೇಲೆ ಅಲ್ಲಲ್ಲಿ ಘಾಯ ಮಾಡಿದನು. ಬಳಿಕ ಅಡವಿಯ ಗಡಿಯ ಬಳಿಗೆ ಹಿಂದುರಿಗಿ, ಅಲ್ಲಿ ತಾನು ಬಿಟ್ಟಿದ್ದ ಸೈನ್ಯಕ್ಕೆ ತನ್ನ ಜಯದ ಸಮಾಚಾರವನ್ನರುಹಿ, ಆ ದುರುಳ ರಕ್ಕಸರ ಸಾಹಸವನ್ನೂ, ತಾನು ತೋರಿಸಿದ ಸಾಮರ್ಥ್ಯವನ್ನೂ, ಅವರು ತನ್ನನ್ನು ಮರಗಳಿಂದಲೂ ಬಂಡೆಗಳಿಂದಲೂ ಹೊಡೆಯಬಂದರೆಂಬ ಸಂಗತಿಯನ್ನೂ, ಆದರೆ ಒಂದೇ ಏಟಿನಿಂದ ಇಬ್ಬರನ್ನು ಕೊಂದವನಿದಿರಿಗೆ

ಅವರಾಟ ಜರುಗದೆ ಹೋದದ್ದನ್ನೂ, ಅವನು ಅಹಂಕಾರದಿಂದ ವಿವರಿಸಿದನು. ಆ ಸೈನಿಕರಲ್ಲೊಬ್ಬನು " ತಮಗೆ ಗಾಯವೇನೂ ಆಗಲಿಲ್ಲವೆ ? " ಎಂದು ಕೇಳಿದನು. ಬೆಕ್ಕೋಜಿ " ಹಾಗುಂಟೆ? ನನ್ನ ಒಂದು ಕೂದಲನ್ನು ಅಲ್ಲಾಡಿಸುವುದಕ್ಕೆ ಕೂಡ ಅವರಿಂದಾಗಲಿಲ್ಲ." ಎಂದು ಉತ್ತರವಿತ್ತನು. ಸಿಪಾಯಿಗಳಿಗೆ ಅವನ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ಕೊನೆಗೆ ಅವನು ಅವರನ್ನು ಆ ರಕ್ಕಸರಿದ್ದೆಡೆಗೆ ಕರೆದುಕೊಂಡು ಹೋದನು. ಬೆಟ್ಟಗಳಂತಿದ್ದ ಆ ದೇಹಗಳನ್ನೂ ಅವುಗಳಿಂದ ನದಿಗಳಂತೆ ಹರಿಯುತ್ತಿದ್ದ ರಕ್ತ ಪ್ರವಾಹಗಳನ್ನೂ, ಅವರು ಬುಡಮುಟ್ಟ ಕಿತ್ತು ಎಸೆದಿದ್ದ ವೃಕ್ಷಗಳನ್ನೂ ಆ ಶಿಪಾಯಿಗಳು ನೋಡಿ ಪರಮಾಶ್ಚರ್ಯ ಭರಿತರಾದರು. ಬೆಕ್ಕೋಜಿ ಅವರೊಡನೆಯೆ ಹಿಂದಿರುಗಿ ರಾಜಾಸ್ಥಾನವನ್ನು ಸೇರಿ, ರಾಜನು ಮಾಡಿದ್ದ ವಾಗ್ದಾನವನ್ನು ನಡೆಸಿಕೊಡಬೇಕೆಂದು ಕೇಳಿದನು. ರಾಜನು ಏನು ಹೇಳುವುದಕ್ಕೂ ತೋಚದೆ ಕೊಂಚ ಹೊತ್ತು ಸುಮ್ಮನಿದ್ದು, ಆಮೇಲೆ " ನಾನು ಕೊಟ್ಟ ಮಾತನ್ನು ನಡಸಿಕೊಡುವುದೇನೋ ಸರಿ ; ಆದರೆ ನೀನು ಅದಕ್ಕೆ ಮುಂಚೆ ಮತ್ತೊಂದು ಕೆಲಸ ಮಾಡಬೇಕು ; ನಮ್ಮ ವಿಶಾಲವಾದ ಅರಣ್ಯದಲ್ಲಿ ಭಯಂಕರವಾದ ಖಡ್ಗಮೃಗವೊಂದಿದೆ. ಅದರಿಂದ ನನ್ನ ರಾಜ್ಯದಲ್ಲಿರುವ ಮನುಷ್ಯರಿಗೂ ದನಕರುಗಳಿಗೂ ಬಲು ಹಿಂಸೆಯಾಗಿದೆ. ಅದನ್ನು ಹೇಗಾದರೂ ಮಾಡಿ ಸಂಹರಿಸಿ ಬರಬೇಕು." ಎಂದು ಹೇಳಿದನು.

ಬೆಕ್ಕೋಜಿ ಕೊಲ್ಲಬೇಕಾಗಿದ್ದ ಮೃಗದಷ್ಟು ದೊಡ್ಡದೂ ಭಯಂಕರವೂ ಆದ ಮೃಗ ಇನ್ನೊಂದೂ ಯಾವಾಗಲೂ ಭೂಮಿಯಮೇಲೆ ಇರಲಿಲ್ಲ. ಅದನ್ನು ಹಿಡಿಯುವುದಕ್ಕೂ ಕೊಲ್ಲುವುದಕ್ಕೂ ಎಷ್ಟೋ ಮಂದಿ ಶೂರರು ಪ್ರಯತ್ನಿಸಿದ್ದರು. ಎಲ್ಲವೂ ನಿಷ್ಫಲವಾಗಿ, ಅದರ ಹಾವಳಿ ಹೆಚ್ಚಿತ್ತು. ಆದರೂ ಬೆಕ್ಕೋಜಿ ಹೆದರದೆ, " ಆಗಲಿ, ಒಂದೇಟಿಗೆ ಏಳ್ವರನ್ನೂ ಆಮೇಲಿಬ್ಬರು ರಕ್ಕಸರನ್ನೂ ಕೊಂದವನಿಗೆ ಇದು ಅಸಾಧ್ಯವೆ ?" ಎಂದು ಜಂಬ ಕೊಚ್ಚಿದನು.

ಅವನು ಒಂದು ಮಚ್ಚುಕತ್ತಿಯನ್ನೂ ಒಂದು ಹಗ್ಗವನ್ನೂ ತೆಗೆದುಕೊಂಡು ಅಡವಿಯನ್ನು ಸೇರಿ, ಒಡನೆ ಬಂದಿದ್ದವರನ್ನು ಮೊದಲಿನಂತೆಯೆ

ದೂರದಲ್ಲಿ ಬಿಟ್ಟು, ತಾನೊಬ್ಬನೇ ಕಾಡಿನೊಳಕ್ಕೆ ಹೋದನು. ಸ್ವಲ್ಪ ಹೊತ್ತಿನೊಳಗೆ ಘೇಂಡಾಮೃಗವು ನೆಗೆಯುತ್ತ ಹಾರುತ್ತ ದೂರದಲ್ಲಿ ಬರುತ್ತಿತ್ತು. ಬೆಕ್ಕೋಜಿ ಅದನ್ನು ನೋಡಿ ಎದೆಗುಂದದೆ, ಒಂದು ದೊಡ್ಡ ಮರದ ಬಳಿ ಹೋಗಿ, ಅದಕ್ಕೆ ಬೆನ್ನೊರಗಿಸಿ ನಿಂತುಕೊಂಡನು. ಅಷ್ಟರಲ್ಲಿಯೇ ಮೃಗ ಓಡೋಡಿ ಬಂದಿತು. ಬೆಕ್ಕೋಜಿ "ಓಹೋ! ಮೆತ್ತಗೆ, ಮೆತ್ತಗೆ, ಅವಸರವೇನು?" ಎಂದನು. ಮೃಗ ಇನ್ನೂ ಬಹಳ ಹತ್ತಿರ ಬಂದು ಒಂದೇ ಹಾರು ಹಾರಿ ಬೆಕ್ಕೋಜಿಯ ಮೇಲೆ ಬೀಳುವುದಾಗಿತ್ತು.

ಆ ಮೃಗಕ್ಕೆ ಹಣೆಯಮೇಲೆ ಒಂದು ದೊಡ್ಡ ಕೂರಾದ ಕೊಂಬಿರುತ್ತದೆಯಷ್ಟೆ? ಈ ಕೊಂಬಿನಿಂದ ಅದು ಶತ್ರುಗಳನ್ನು ತಿವಿದು ಕೊಲ್ಲುತ್ತದೆ. ಮೃಗವು ಚೆನ್ನಾಗಿ ಗುರಿಯಿಟ್ಟು ಹಾರುತ್ತಲೇ ಬೆಕ್ಕೋಜಿ ನಿಂತಿದ್ದ ಸ್ಥಳದಿಂದ ಸರ್ರನೆ ಪಕ್ಕಕ್ಕೆ ಜರುಗಿದನು. ಮೃಗದ ಕೊಂಬು ಬೆಕ್ಕೋಜಿಯನ್ನಿರಿಯುವುದಕ್ಕೆ ಬದಲಾಗಿ ಮರದಲ್ಲಿ ಭದ್ರವಾಗಿ ಸಿಕ್ಕಿಕೊಂಡಿತು. ಬೆಕ್ಕೋಜಿ "ಜೈ ವಿಠೋಬ!" ಎಂದು ಕೂಗಿ, ಹಗ್ಗವನ್ನು ಮೃಗದ ಕುತ್ತಿಗೆಗೆ ಸುತ್ತಿ ಗಂಟುಹಾಕಿ, ಮಚ್ಚುಕತ್ತಿಯಿಂದ ಅದರ ಕೊಂಬನ್ನು ಕತ್ತರಿಸಿ, ಆ ಮೃಗವನ್ನು ರಾಜನ ಬಳಿಗೆ ಕರೆತಂದನು. ಅದನ್ನು ನೋಡಿದವರ ಆಶ್ಚರ್ಯಕ್ಕೆ ಮೇರೆಯೇ ಇರಲಿಲ್ಲ

ರಾಜನಿಗೆ ಮಾತ್ರ ಚಿಂತೆ. ಈ ಉಪಾಯಗಾರನನ್ನು ಓಡಿಸಬೇಕೆಂದು ಮಾಡಿದ ಪ್ರಯತ್ನದಿಂದ ಅವನಿಗೆ ಅರ್ಧ ರಾಜ್ಯವನ್ನೂ ತನ್ನ ಮಗಳನ್ನೂ ಕೊಡಬೇಕಾಯಿತು. ಹೇಗಾದರೂ ಅವನನ್ನು ರಾಜ್ಯದಲ್ಲಿರದಂತೆ ಮಾಡಬೇಕು. ಅದು ಹೇಗಾದೀತು? ರಾಜನು ಮೂರನೆಯ ಉಪಾಯವೊಂದನ್ನು ಹುಡುಕಿದನು. ಬೆಕ್ಕೋಜಿಯನ್ನು ಕರಸಿ, "ಎಲೈ ಧೀರನೆ, ನೀನು ಎರಡು ಸಲವೂ ನನ್ನ ಆಜ್ಞೆಯನ್ನು ನೆರವೇರಿಸಿರುವೆ. ಆದರೂ ಇನ್ನೊಂದಾಜ್ಞೆಯಿರುವುದು. ಅದನ್ನು ನೆರವೇರಿಸಿದರೆ ಅರ್ಧ ರಾಜ್ಯವೂ ಮುದ್ದುಗುವರಿಯೂ ನಿನ್ನ ಕೈ ಸೇರುವರು." ಎಂದನು. ಬೆಕ್ಕೋಜಿ "ಸ್ವಾಮಿ ಚಿತ್ತದಂತೆ" ಎಂದನು. ರಾಜನು, ಪಕ್ಕದ ಅರಣ್ಯದಲ್ಲಿ ಕ್ರೂರವಾದ ಕಾಡುಹಂದಿಯೊಂದಿರುವುದೆಂದೂ, ಅದರಿಂದ

ಜನರಿಗೂ ಪಶುಗಳಿಗೂ ಬಲು ಕಾಟವೆಂದೂ, ಅದನ್ನು ಕೊಲ್ಲಬೇಕೆಂದೂ ಹೇಳಿದನು. ಬೆಕ್ಕೋಜಿ ಹಿಂದೆಗೆಯುವನೆ ? "ಅದೇನು ಮಹಾ ವಿಷಯ ?—ನನಗದು ಮಕ್ಕಳಾಟ" ಎಂದನು.

ಯಥಾಪ್ರಕಾರ ಹಿಂದೆ ಬಂದವರನ್ನು ಹೊರಗೆ ಬಿಟ್ಟು ಬೆಕ್ಕೋಜಿ ಕಾಡಿನೊಳಕ್ಕೆ ಪ್ರವೇಶಿಸಿದನು. ಅವನು ಅಲ್ಲಿ ಸುತ್ತಾಡುತ್ತಿರುವಾಗ ಹಂದಿ ಅವನನ್ನು ನೋಡಿ ಅಟ್ಟಿಕೊಂಡು ಬಂದಿತು. ಅಬ್ಬಬ್ಬಾ ! ಅದರ ಮೊನಚಾದ ಕೋರೆಹಲ್ಲುಗಳಿಗೆ ಸಿಕ್ಕಿದವನು ಉಳಿಯುವುದುಂಟೆ ? ಆದರೂ ಬೆಕ್ಕೋಜಿಯ ಉಪಾಯವೇ ಉಪಾಯ. ಅವನು ಓಡುತ್ತಾ ಓಡುತ್ತಾ ಅಲ್ಲಿದ್ದ ಒಂದು ಪಾಳು ದೇವಸ್ಥಾನದ ಮಹಾದ್ವಾರದಲ್ಲಿ ಪ್ರವೇಶಿಸಿದನು. ಹಂದಿ ಅವನನ್ನು ಹಿಂಬಾಲಿಸಿತು. ಆದರೆ ಅವನು ಬೇಗನೆ ಪ್ರಾಕಾರದ ಪಾಳು ಗೋಡೆಯನ್ನು ಹಾರಿ ದೇವಾಲಯದ ಮುಂಭಾಗಕ್ಕೆ ಬಂದು ಕದವನ್ನೆಳೆದು ಮುಚ್ಚಿಬಿಟ್ಟನು. ಹಂದಿ ಒಳಗೆ ಸೆರೆಯಲ್ಲಿ ಸಿಕ್ಕಿತು. ಅದರ ಮೈ ಭಾರವಾಗಿದ್ದದ್ದರಿಂದ ಗೋಡೆಯನ್ನು ಹಾರುವುದು ಅದರಿಂದಾಗಲಿಲ್ಲ. ಬೆಕ್ಕೋಜಿ "ಜೈ ಜೈ ವಿಠೋಬಾ !" ಎಂದುಕೊಂಡು ಹೋಗಿ, ತನ್ನೊಡನೆ ಬಂದಿದ್ದ ಬೇಟೆಗಾರರನ್ನು ಕರೆತಂದು, ಅವರಿಗೆ ಆ ವಿನೋದವನ್ನು ತೋರಿಸಿದನು. ಅವರು ಆ ಹಂದಿಯನ್ನು ಬೋನಿನೊಳಗೆ ಕೂಡಿ ರಾಜನೆಡೆಗೆ ಒಯ್ದರು.

ಇಷ್ಟಾದ ಮೇಲೆ ರಾಜನು ಕೊಟ್ಟಿದ್ದ ಮಾತನ್ನು ನಡಸಿಕೊಡದೆ ಇರಬಹುದೆ ? ಕೂಡದು. ಆದಕಾರಣ ಅತ್ಯಂತ ವೈಭವದಿಂದ ಬೆಕ್ಕೋಜಿಗೂ ರಾಜಕುಮಾರಿಗೂ ಮದುವೆ ಜರುಗಿತು. ಅವನು ಅರ್ಧ ರಾಜ್ಯಕ್ಕೆ ಒಡೆಯನೂ ಆದನು.

ಒಂದಾನೊಂದು ರಾತ್ರಿ ಬೆಕ್ಕೋಜಿ ನಿದ್ರಿಸುತ್ತಿರುವಾಗ "ತಮ್ಮಾ, ಅಂಗಿಯನ್ನು ಬೇಗ ಬೇಗನೆ ಹೊಲಿ ; ತಡಮಾಡಿದರೆ ಗಜದ ಕಟ್ಟಿಗೆಯಿಂದ ಹೊಡೆದೇನು !" ಎಂದು ಕಲವರಿಸಿದನು. ಇದು ಅವನ ಹೆಂಡತಿಯ ಕಿವಿಗೆ ಬಿತ್ತು. ಹೀಗೆ ಅನೇಕಾವರ್ತಿ ಆಯಿತು. ಅದರಿಂದ ಅವನು ದರ್ಜಿಯವನಿರಬಹುದೆಂದು ಅವಳಿಗೆ ಅನುಮಾನ ಹುಟ್ಟಿತು.

ಅದನ್ನವಳು ತಂದೆಗೆ ವಿವರಿಸಿದಳು. ಆತನು, " ಈ ರಾತ್ರಿ ಅವನು ನಿದ್ದೆಹೋದಮೇಲೆ ನೀನು ಮಲಗುವ ಕೋಣೆಯಿಂದ ಬಂದುಬಿಡು. ಬಾಗಲಿಗೆ ಬೀಗ ಹಾಕಬೇಡ. ನಮ್ಮ ಭಟರು ಅಲ್ಲಿಗೆ ಹೋಗಿ, ಅವನ ಕೈ ಕಾಲುಗಳನ್ನು ಕಟ್ಟಿ ಅವನನ್ನು ತೆಗೆದುಕೊಂಡು ಹೋಗಿ ಒಂದು ಹಡಗಿನಲ್ಲಿ ಹಾಕುವರು. ಆ ಹಡಗು ಅವನನ್ನು ದೂರದಲ್ಲಿರುವ ನಿರ್ಜನ ವಾದ ದ್ವೀಪಕ್ಕೆ ಹೊತ್ತುಕೊಂಡು ಹೋಗುವುದು " ಎಂದು ಹೇಳಿದನು. ರಾಜಕುವರಿಯು ಸಮಾಧಾನಪಟ್ಟು ಹೊರಟುಹೋದಳು. ರಾಜನು ತನ್ನ ಏರ್ಪಾಟನ್ನು ಭಟರಿಗೆ ತಿಳಿಸಲು ಹೊರಟು ಹೋದನು.

ತಂದೆ ಮಕ್ಕಳ ಈ ಸಂಭಾಷಣೆಯನ್ನು ಒಬ್ಬ ರಾಜದೂತನು ಹೊಂಚಿ ಕೇಳುತ್ತಿದ್ದನು. ಅವನಿಗೆ ಬೆಕ್ಕೋಜಿಯಲ್ಲಿ ತುಂಬಾ ಪ್ರೀತಿ. ಬೆಕ್ಕೋಜಿಯ ಧೈರ್ಯವನ್ನೂ ತಂತ್ರವನ್ನೂ ಅವನು ಚೆನ್ನಾಗಿ ತಿಳಿದಿದ್ದನು. ಅಂಥಾ ಬೆಕ್ಕೋಜಿಗೆ ಉಂಟಾಗುವ ಕಷ್ಟವನ್ನು ಹೇಗಾದರೂ ತಪ್ಪಿಸ ಬೇಕೆಂದು ಅವನು ನಿಶ್ಚಯಿಸಿ, ನಡೆದ ಸಂಗತಿಯನ್ನೆಲ್ಲಾ ಬೆಕ್ಕೋಜಿಗೆ ಅರುಹಿದನು.

ಉಪಾಯಗಳ ಗಣಿಯಾದ ಆ ದರ್ಜಿ—" ಓಹೋ, ಹಾಗೆಯೆ ? ಹಾಗಾದರೆ ಬಾಗಲಿಗೆ ಅವರು ಕಾಣದ ಅಗಳಿಯೊಂದಿರುವಂತೆ ಮಾಡು ವೆನು " ಎಂದು ಹೇಳಿದನು.

ರಾತ್ರಿಯಾಯಿತು. ಎಲ್ಲರೂ ಮಲಗಿದರು. ಬೆಕ್ಕೋಜಿಯೂ ಮಲಗಿ ಕಣ್ಣುಮುಚ್ಚಿ ಗೊರಕಿಡುತ್ತಿದ್ದನು. ಅವನ ಮಡದಿ ಅವನು ನಿದ್ದೆಯಲ್ಲಿದ್ದಾನೆಂದು ನಂಬಿ ಹಾಸಿಗೆಯಿಂದೆದ್ದು ಹೋದಳು. ಭಟರು ಅದನ್ನು ಕಂಡು ತಮ್ಮ ಕೆಲಸವನ್ನು ನೆರವೇರಿಸ ಬಂದರು. ಅವರು ಬಾಗಿಲಬಳಿ ಬರುವ ವೇಳೆಗೆ ಸರಿಯಾಗಿ, ಬೆ ಕ್ಕೋ ಜಿ ಗಟ್ಟಿಯಾಗಿ " ತಮ್ಮಾ, ಅಂಗಿಯನ್ನು ಬೇಗ ಬೇಗ ಹೊಲಿ, ತಡಮಾಡಿದರೆ ಗಜದ ಕಟ್ಟಿಗೆಯನ್ನು ನೆನಸಿಕೊಳ್ಳಬೇಕಾಗುವುದು. ನಾನು ಯಾರೆಂದಿರುವೆ ? ಏಟೊಂದರಿಂದ ಏಳ್ವರನ್ನು ಕೊಂದು, ರಕ್ಕಸರಿಬ್ಬರನ್ನು ಹಿಡಿದು, ಗೇಂಡಾ ಮೃಗವನ್ನು ಕಡಿದು, ಕಾಡ ಹಂದಿಯನ್ನು ಹಿಡಿದ ಶೂರನಲ್ಲವೆ ನಾನು ?

ನನ್ನ ಮಲಗುವ ಮನೆಯ ಬಾಗಿಲ ಕಾಯುವವರಿಂದ ನಾನು ಭಯ ಪಡುವೆನೆ ? " ಎಂದನು.

ಇದನ್ನು ಕೇಳಿದ ರಾಜಭಟರು ಭಯದಿಂದ ಎದೆಯೊಡೆದವರಾಗಿ, ಹಿಂದು ಮುಂದು ನೋಡದೆ ಪಲಾಯನ ಮಾಡಿದರು. ಈ ಸಂಗತಿ ರಾಜನಿಗೂ ರಾಜಕುವರಿಗೂ ತಿಳಿದು, ಅವರಿಗೆ ಬೆಕ್ಕೋಜಿಯಲ್ಲಿ ಭಯವೂ ಗೌರವವೂ ದ್ವಿಗುಣವಾದವು.

ಅಲ್ಲಿಂದ ಮುಂದಕ್ಕೆ ಶ್ರೀಮನ್ಮಹಾರಾಜಾ ಪ್ರತಾಪ ಮಾರ್ತಾಂಡ ಬೆಕ್ಕೋಜಿರಾಯರು ರಾಣಿಯೊಡನೆ ಸುಖವಾಗಿ ಬಾಳಿ, ಮಕ್ಕಳು ಮೊಮ್ಮಕ್ಕಳನ್ನು ಪಡೆದು, ಬಹುಕಾಲ ರಾಜ್ಯವನ್ನಾಳುತ್ತಿದ್ದರು.



# ಭೇಕ ರಾಜ

ಈಗಿಗೆ ಐನೂರು ವರ್ಷಗಳ ಹಿಂದೆ ಜರ್ಮನಿ ದೇಶವನ್ನು ವಿಲಿಯಮ್ ಎಂಬ ಅರಸು ಆಳುತ್ತಿದ್ದನು. ಆ ಕಾಲದಲ್ಲಿ ಜನರ ಕೋರಿಕೆಗಳೆಲ್ಲವೂ ಬಹು ಸುಲಭವಾಗಿ ನೆರವೇರುತ್ತಿದ್ದವು. ಆ ಅರಸನಿಗೆ ಕೆಲವು ಮಂದಿ ಬಲು ಚೆಲುವೆಯರಾದ ಹೆಣ್ಣು ಮಕ್ಕಳಿದ್ದರು. ಅವರಲ್ಲಿ ಕಿರಿಯಳು ಉಳಿದೆಲ್ಲರಿಗಿಂತಲೂ ತುಂಬಾ ಚೆಲುವೆ. ಅವಳು ತನ್ನ ಅರಮನೆಯಿಂದ ಹೊರಕ್ಕೆ ಬಂದಾಗ ಅವಳ ಬೆಡಗನ್ನು ನೋಡಿ ಸೂರ್ಯನೂ ಬೆರಗಾಗುತ್ತಿದ್ದನು. ಅವಳ ಹೆಸರು ಮೇರಿ.

ಆ ಅರಮನೆಗೆ ಉತ್ತರ ದಿಕ್ಕಿನಲ್ಲಿ ಸ್ವಲ್ಪ ದೂರದಲ್ಲಿ ಒಂದು ಅಡವಿಯಿತ್ತು. ಅದರಲ್ಲಿ ಬಗೆ ಬಗೆಯ ಮರಗಳೂ, ಗಿಡಗಳೂ, ಬಳ್ಳಿಗಳೂ ಇದ್ದವು. ಅವುಗಳ ನಡುವೆ ಒಂದು ಸಣ್ಣ ಕೊಳವಿದ್ದಿತು.

ಬೇಸಗೆಯಲ್ಲಿ ಅದೊಂದುದಿನ ರಾಜಕುಮಾರಿ ಮೇರಿಯು ಶೆಕೆಯನ್ನು ತಡೆಯಲಾರದೆ, ತಂಪಾಗಿದ್ದ ಆ ಕಾಡಿನೊಳಕ್ಕೆ ಹೋಗಿ ಕೊಳದ ಬಳಿ ಒಂದುಕಡೆ ಕುಳಿತು, ಚಿನ್ನದ ಚೆಂಡೊಂದನ್ನು ಮೇಲಕ್ಕೆಸೆಯುತ್ತಲೂ, ಅದನ್ನು ಕೈಯಿಂದ ಹಿಡಿಯುತ್ತಲೂ, ತಿರುಗಿ ಎಸೆಯುತ್ತಲೂ, ತಿರುಗಿ ಹಿಡಿಯುತ್ತಲೂ ಆಟವಾಡುತಲಿದ್ದಳು. ಹೀಗಿರಲಾಗಿ, ಆ ಚೆಂಡು ಒಂದು ಸಾರಿ ಅವಳ ಕೈಯಲ್ಲಿ ಬೀಳದೆ ನೆಲದ ಮೇಲೆ ಬಿದ್ದು, ಹುಲ್ಲಿನ ಮೇಲೆ ಉರುಳಿಕೊಂಡು ಹೋಗಿ ಕೊಳವನ್ನು ಸೇರಿತು.

ಅರಸುಮಗಳು ಅದರ ಹಿಂದೆಯೇ ಓಡಿದಳು ; ಆದರೆ ಅದು ಸಿಕ್ಕಲಿಲ್ಲ. ಕೊಳದಿಂದ ಮೇಲಕ್ಕೆ ತೆಗೆಯಬೇಕೆಂದು ನೀರಿನಲ್ಲಿ ಇಣಿಕಿ ನೋಡಿದಳು. ನೀರು ಆಳವಾಗಿದ್ದ ಕಾರಣ ಅದು ಅವಳ ಕಣ್ಣಿಗೆ ಕಾಣಿಸಲಿಲ್ಲ. ಅಳತೊಡಗಿದಳು. ಕೊಂಚ ಹೊತ್ತು ಗೋಳಾಡಿದ ಮೇಲೆ ಅವಳಿಗೆ ಯಾರದೋ ಒಂದು ಧ್ವನಿ ಕೇಳಬಂದಿತು :



ಖಡ್ಗಮೃಗದ ಕೊಂಬು ಬೆಕ್ಕೋಜಿಯನ್ನಿರಿಯುವುದಕ್ಕೆ ಪ್ರತಿಯಾಗಿ ಮರದಲ್ಲಿ ಭದ್ರವಾಗಿ ಸಿಕ್ಕಿಕೊಂಡಿತು.



ಕಪ್ಪೆ ನೀರಿನಲ್ಲಿ ಮುಳುಗಿ, ಕೊಳದ ತಳವನ್ನುಸೇರಿ, ಚೆಂಡನ್ನು ಹುಡುಕಿ, ಬಾಯಲ್ಲಿ ಕಚ್ಚಿಕೊಂಡು ಮೇಲಕ್ಕೆ ಬಂದು, ಹುಲ್ಲಿನ ಮೇಲೆ ಹಾಕಿತು.



ಅವನೆದ್ದು ಕಣ್ಣು ಬಿಡುವಾಗ ಟೀ ತಪ್ಪಲೆ ತಲೆ ಬಾಲ ಕಾಲು ಕೂದಲುಗಳಿಂದ ಕೂಡಿ,
ಕರಡಿಯ ರೂಪದಿಂದ ಮನೆಯೆಲ್ಲಾ ಹಾರಾಡುತ್ತಿತ್ತು.



........ ಸುಲೋಚನ ಮೂಗಿಗೇ ಬಾಧ್ಯಪಟ್ಟಿದೆಯೆಂದು ಚೆನ್ನಾಗಿ ಸ್ಥಿರವಾಗುತ್ತದೆ.

" ರಾಜಕುವರಿ, ನೀನಳುವುದೇಕೆ ? ನಿನ್ನ ಕಣ್ಣಿನಲ್ಲಿ ನೀರು ಬರುವುದನ್ನು ನೋಡಿದರೆ ಕಲ್ಲಿಗೂ ಮರುಕ ಹುಟ್ಟುತ್ತದೆ."

ಹೀಗೆಂದವರಾರೆಂದು ಅವಳು ಅತ್ತಿತ್ತ ನೋಡಲಾಗಿ, ಒಂದು ಕಪ್ಪೆ ನೀರಿನೊಳಗಿನಿಂದ ತನ್ನ ಕೆಟ್ಟ ಮೋರೆಯನ್ನು ಕೊಳದ ದಡದ ಮೇಲಕ್ಕೆ ಚಾಚಿಕೊಂಡಿದ್ದದ್ದು ಕಾಣಿಸಿತು. ಅವಳು ಅದನ್ನು ಕುರಿತು, "ಇಲ್ಲಿರುವೆಯಾ, ಮುದಿಕಪ್ಪೆ ? ನನ್ನ ಬಂಗಾರದ ಚೆಂಡು ಈ ಕೊಳದಲ್ಲಿ ಬಿದ್ದು ಹೋಯಿತು. ಅದಕ್ಕಾಗಿ ನನಗೆ ಅಳು ಬರುತ್ತಿದೆ " ಎಂದಳು.

" ಇನ್ನು ನೀನು ಅಳಬೇಡ. ಅದನ್ನು ನಾನು ತಂದು ಕೊಟ್ಟೇನು. ಆದರೆ, ನೀನು ಪ್ರತಿಯಾಗಿ ನನಗೆ ಕೊಡುವುದೇನು ? " ಎಂದು ಕಪ್ಪೆ ಕೇಳಿತು.

" ನೀನು ಏನುಬೇಕೆಂದರೂ ಕೊಡುತ್ತೇನೆ. ನಿನಗೆ ನನ್ನ ಒಳ್ಳೊಳ್ಳೆಯ ಬಟ್ಟೆಗಳು ಬೇಕೆ ? ನನ್ನ ಮುತ್ತಿನ ಸರಗಳು ಬೇಕೆ ? ಒಡವೆಗಳು ಬೇಕೆ? ನನ್ನ ಚಿನ್ನದ ಕಿರೀಟ ಬೇಕೆ ?–" ಎಂದು ಕೇಳಿದಳು.

ಕಪ್ಪೆಯು "ನಿನ್ನ ಬಟ್ಟೆಗಳೂ, ನಿನ್ನ ಮುತ್ತಿನ ಸರಗಳೂ, ನಿನ್ನ ಒಡವೆಗಳೂ, ನಿನ್ನ ಚಿನ್ನದ ಕಿರೀಟವೂ ನನಗೆ ಬೇಡ. ನನಗೆ ಬೇಕಾದುದು ನಿನ್ನ ಸ್ನೇಹ. ನಿನ್ನ ಸಹವಾಸಿಯಾಗಿಯೂ ಒಡನಾಡಿಯಾಗಿಯೂ ಇದ್ದುಕೊಂಡು ನಿನ್ನೊಡನೆ ನೀನು ಊಟಮಾಡುವ ಬಂಗಾರದ ತಟ್ಟೆಯಲ್ಲಿಯೇ ಉಂಡು, ನೀನು ನೀರು ಕುಡಿಯುವ ರತ್ನದ ಬಟ್ಟಲಿನಿಂದಲೇ ಕುಡಿದು, ನಿನ್ನ ರೇಷ್ಮೆಯ ಸುಪ್ಪತ್ತಿಗೆಯಲ್ಲಿಯೇ ಮಲಗಬೇಕೆಂದು ನನಗಾಶೆ. ನೀನು ಹಾಗೆ ಮಾಡಗೊಡಿಸುವೆಯಾದರೆ, ನಾನು ನೀರಿನೊಳಗಡೆ ಮುಳುಗಿ ನಿನ್ನ ಚೆಂಡನ್ನು ನಿನಗೆ ತಂದುಕೊಡುತ್ತೇನೆ" ಎಂದು ಹೇಳಿತು.

ಅದಕ್ಕವಳು " ಓಹೋ, ಹಾಗೆ ಆಗಬಹುದು. ನನ್ನ ಚೆಂಡು ನನಗೆ ಸಿಕ್ಕಿದರೆ ಸಾಕು. ಏನು ಕೇಳಿದರೂ ಕೊಟ್ಟೇನು " ಎಂದಳು. ಆದರೆ ಈ ಮಾತು ಅವಳ ತುಟಿಯಿಂದ ಹೊರಟಿತೇ ಹೊರತು ಮನಸಿನಿಂದ ಹೊರಡಲಿಲ್ಲ. ಮನಸ್ಸಿನಲ್ಲಿ ಅವಳು, " ಮೂರು ಹೊತ್ತೂ ನೀರಿನಲ್ಲಿ

ಬಿದ್ದು ವಟ್ರೈ ! ವಟ್ರೈ ! ಎಂದು ಅರಚಿಕೊಳ್ಳುವ ಈ ಹೇಸಿಕೆಯ ಜಂತು ನನ್ನೊಡನೆ ಇರಲಾದೀತೆ ? " ಎಂದು ಅಂದುಕೊಂಡಳು.

ಕಪ್ಪೆಯು ಅವಳ ಬಾಯಿಂದ ಒಪ್ಪಿತದ ಮಾತು ಬಂದಕೂಡಲೆ ನೀರಿನಲ್ಲಿ ಮುಳುಗಿ, ಕೊಳದ ತಳವನ್ನು ಸೇರಿ, ಚೆಂಡನ್ನು ಹುಡುಕಿ, ಬಾಯಲ್ಲಿ ಕಚ್ಚಿಕೊಂಡು ಮೇಲಕ್ಕೆ ಬಂದು, ಹುಲ್ಲಿನಮೇಲೆ ಉರುಳಿಸಿತು. ರಾಜಪುತ್ರಿ ಅದನ್ನು ಕಂಡು ಸಂತಸದಿಂದ ಉಬ್ಬಿ ಕುಣಿದಾಡಿ, ಆ ಚೆಂಡನ್ನು ತೆಗೆದುಕೊಂಡು ಅರಮನೆಯಕಡೆಗೆ ಓಡಿದಳು.

ಕಪ್ಪೆಯು " ತಾಳು, ತಾಳು ! ನನ್ನನ್ನೂ ಕರೆದುಕೊಂಡು ಹೋಗು. ನಾನು ನಿನ್ನಷ್ಟು ಬೇಗನೆ ಓಡಲಾರೆ " ಎಂದಿತು ಅದರ ಮಾತಿಗೆ ಅವಳು ಕಿವಿಗೊಡದೆ, ಓಡಿ ಓಡಿ ಮನೆ ಸೇರಿಕೊಂಡು, ಸ್ವಲ್ಪ ಹೊತ್ತಾದ ಮೇಲೆ, ಕಪ್ಪೆಯನ್ನು ಮರತೇಹೋದಳು. ಕಪ್ಪೆ ವ್ಯಸನದಿಂದ ಕೊಳದಲ್ಲಿ ಯೇ ನಿಲ್ಲಬೇಕಾಯಿತು.

ಮಾರುದಿವಸ ವಿಲಿಯಮ್ ರಾಜನೂ, ರಾಜಕುಮಾರಿಯರೂ, ನೆಂಟರಿಷ್ಟರೂ, ಅರಮನೆಯಲ್ಲಿ ಕುಳಿತು ಊಟಮಾಡುತ್ತಿರುವಾಗ ಭೋಜನ ಶಾಲೆಯ ಹೊರಗಡೆ ಮೆಟ್ಟಲುಗಳಮೇಲೆ ವಿಚಿತ್ರವಾದ ಒಂದು ಬಗೆಯ ಸಪ್ಪುಳವಾಗಿ, ಕೂಡಲೆ ಯಾರೋ ಬಾಗಿಲು ತಟ್ಟಿ, " ಮಾರಾಯನ ಮುದ್ದುಮಗಳೆ, ಕದವನ್ನು ತೆರೆ " ಎಂದು ಹೇಳಿದಂತಾಯಿತು. ಆಗ ಮೇರಿಯು ಎದ್ದುಹೋಗಿ ಬಾಗಿಲು ತೆರೆದು ನೋಡಲು, ಅಲ್ಲಿ ಯಾರಿದ್ದಿರ ಬಹುದು ?—ಆ ಕಪ್ಪೆಯೇ. ಅದನ್ನು ಕಂಡು, ಅವಳು ಬೆದರಿ ಆತುರ ದಿಂದ ಬಾಗಿಲು ಮುಚ್ಚಿಕೊಂಡು ಹೋಗಿ, ತನ್ನ ಚಿನ್ನದ ತಟ್ಟೆಯ ಮುಂದೆ ಕುಳಿತಳು. ಅವಳ ಮುಖ ದಿಗಿಲುಬಿದ್ದವರ ಮುಖದಂತೆ ಬಿಳುಪೇರಿತ್ತು. ಅದನ್ನು ಅವಳ ತಂದೆ ಗಮನಿಸಿ " ಮಗು, ಬಾಗಿಲ ಹತ್ತಿರ ಇರುವವರು ಯಾರು ? -ಭೂತವೊ, ಭೇತಾಳವೊ " ಎಂದು ಕೇಳಿದನು.

ಮೇರಿ :—" ಇಲ್ಲ, ಅಪ್ಪ, ಅದು ಭೂತವೂ ಅಲ್ಲ, ಭೇತಾಳವೂ ಅಲ್ಲ. ಅದೊಂದು ವಿಕಾರವಾದ ಕಪ್ಪೆ "

ವಿಲಿಯಮ್ :—" ಕಪ್ಪೆಯೆ ? ಅದಕ್ಕೆ ನಿನ್ನಲ್ಲೇನು ಕೆಲಸ ? "

ಮೇರಿ :—"ಅಪ್ಪಾ ! ನಿನ್ನೆ ನಾನು ಕಾಡಿನಲ್ಲಿ ಕೊಳದಬಳಿ ಚಿನ್ನದ ಚೆಂಡೆಸೆದುಕೊಂಡು ಆಡುತ್ತಿದ್ದಾಗ, ಅದು ನೀರಿನೊಳಕ್ಕೆ ಬಿದ್ದು ಹೋಯಿತು. ನಾನು ಮೇಲಕ್ಕೆ ತರಲು ಏನು ಮಾಡುವುದಕ್ಕೂ ತೋರದೆ ಅಳುತ್ತಿರಲು ಈ ಕಪ್ಪೆ ಅದನ್ನು ತಂದು ಕೊಟ್ಟಿತು. ಆಗ ಕಪ್ಪೆ ಕೇಳಿದ ಮೇರೆಗೆ, ನಾನು ಅದನ್ನು ಸ್ನೇಹಿತನಾಗಿ ಮಾಡಿಕೊಳ್ಳಲು ಒಪ್ಪಿಕೊಂಡೆ. ಆದರೆ ಅದು ನೀರನ್ನುಬಿಟ್ಟು ಬರುವುದಿಲ್ಲವೆಂದು ತಿಳಿದುಕೊಂಡು ಆಗ ಒಪ್ಪಿದೆ. ಈಗ ಅದು ಇಲ್ಲಿಗೆ ಬಂದೇ ಬಿಟ್ಟಿದೆ !"

ಅಷ್ಟರಲ್ಲಿಯೇ ಕದವನ್ನು ಮರಳಿ ತಟ್ಟಿದಹಾಗಾಗಿ, ಈ ಮಾತುಗಳು ಎಲ್ಲರಿಗೂ ಕೇಳಬಂದವು :—

" ಬಾಗಿಲನು ತೆರೆ, ದೊರೆಯ ಮಗಳೇ,
ಸಾಗದೆನ್ನೊಳು ನಿನ್ನ ಮೋಸವು :
ಆಗ ಕೊಳದೊಳು ಮುಳುಗಿ, ಚೆಂಡನು
ಬೇಗ ನಾಂ ತರಲಿಲ್ಲವೇ ? "

ಒಡನೆಯೆ ದೊರೆಯು "ಮಗು, ಆಡಿದ ಮಾತಿನಿಂದ ತಪ್ಪಬಾರದು. ಹೋಗಿ ಅದನ್ನು ಕರೆದು ತಾ '' ಎಂದನು. ಆಗ ಅವಳು ಬಾಗಿಲನ್ನು ತೆರೆದು ಕಪ್ಪೆಯನ್ನು ಕರೆತರಲೇ ಬೇಕಾಯಿತು. ಕಪ್ಪೆ ಹಾರುತ್ತಾ ಹಾರುತ್ತಾ ಅವಳನ್ನು ಹಿಂಬಾಲಿಸಿಕೊಂಡು ಬಂದು, ಕಡೆಗೆ ಕುಪ್ಪಳಿಸಿ ಅವಳ ಕುರ್ಚಿಯ ಕೈಯಮೇಲೆ ಕುಳಿತುಕೊಂಡಿತು. ಅವಳು ಕುಳಿತುಕೊಂಡೊಡನೆಯೆ ಅದು "ನನ್ನನ್ನು ಎತ್ತಿಕೋ" ಎಂದು ಕೇಳಿತು. ಅವಳು ಆ ಕೋರಿಕೆಯನ್ನು ಲಾಲಿಸಲಿಲ್ಲ. ಆದಕ್ಕೆ ದೊರೆಯು ಕೋಪಗೊಂಡನು. ಆಮೇಲೆ ಅದನ್ನವಳು ಎತ್ತಿಕೊಳ್ಳಲೇ ಬೇಕಾಯಿತು. ಕೂಡಲೆ ಆ ಭೇಕವು ಅವಳ ಕೈಯಿಂದ ಮೇಜಿನ ಮೇಲಕ್ಕೆ ಹಾರಿ, ಅವಳನ್ನು ಕುರಿತು, "ನಿನ್ನ ಬಂಗಾರದ ಊಟದ ತಟ್ಟೆಯನ್ನು ನನ್ನಬಳಿಗೆ ತಳ್ಳು, ನಾವಿಬ್ಬರೂ ಒಟ್ಟಿಗೆ ಊಟ ಮಾಡೋಣ" ಎಂದಿತು. ದೊರೆಮಗಳು ಹಾಗೆಯೇ ಮಾಡಿದಳು; ಆದರೂ ಅವಳಿಗೆ ತುಂಬಾ ಅಸಮಾಧಾನವಾಗಿತ್ತೆಂದು ಅವಳ ಮುಖ ನೋಡಿದರೆ ಗೊತ್ತಾಗುತ್ತಿತ್ತು. ಕಪ್ಪೆಗೆ ಆ ತಿಂಡಿ ಬಲು ಸವಿಯಾಗಿತ್ತು. ಅದು ಹೊಟ್ಟೆ ಬಿರಿಯ ಮೆದ್ದು, ತೇಗಿ, " ತಿಂದದ್ದೂ ಕುಡಿದದೂ ಸಾಕು.

ನನಗೆ ಈಗ ಬಹಳ ಬಳಲಿಕೆಯಾಗಿದೆ. ನನ್ನನ್ನು ಮಹಡಿಯ ಮೇಲಕ್ಕೆ ಕರೆದುಕೊಂಡು ಹೋಗಿ, ನಿನ್ನ ಮೆತ್ತನೆಯ ಹಾಸಿಗೆಯಲ್ಲಿ ಮಲಗಿಸು. ನಾವಿಬ್ಬರೂ ನಿದ್ದೆ ಹೋಗೋಣ ” ಎಂದಿತು.

ರಾಜಕುವರಿಯು ಇದನ್ನು ಕೇಳಿ ಅಳತೊಡಗಿದಳು. ಕಪ್ಪೆಯ ದೆಸೆಯಿಂದ ಅವಳಿಗೆ ನಿಜವಾಗಿಯೂ ಬಲು ಹೆದರಿಕೆಯಾಗಿತ್ತು. ಅದನ್ನು ಮುಟ್ಟುವುದಕ್ಕೂ ಅವಳಿಗೆ ಅಂಜಿಕೆ. ಆದರೆ ಈಗ ಅದು ಅವಳ ಸೊಗಸಾದ ಹಾಸಿಗೆಯ ಮೇಲೆ ಅವಳ ಮಗ್ಗುಲಲ್ಲಿಯೇ ನಿದ್ರಿಸಬೇಕೆಂದು ಬಯಸುತ್ತಿತ್ತು.

ದೊರೆಯು ಅವಳ ಅಳುವನ್ನು ಕಂಡು ಪುನಃ ಅಸಮಾಧಾನಪಟ್ಟು, “ ಕಷ್ಟದಲ್ಲಿದ್ದಾಗ ನಿನಗೆ ಸಹಾಯ ಮಾಡಿದವರನ್ನು ನೀನು ಈಗ ತಳ್ಳಿಹಾಕಬಾರದು ” ಎಂದನು. ಈಗ ಅವಳು ಮಾಡುವುದೇನು ? ತಂದೆಯ ಮಾತು ಮೀರಲಾಗುವುದೇ ? ಆ ಅಸಹ್ಯ ಜಂತುವನ್ನು ಎಡಗೈಯ ಎರಡು ಬೆರಳುಗಳಲ್ಲಿ ಹಿಡಿದುಕೊಂಡು, ಮಹಡಿಯ ಮೇಲಿನ ತನ್ನ ಕೋಣೆಗೆ ಹೋಗಿ ಅಲ್ಲಿ ಒಂದು ಮೂಲೆಯಲ್ಲಿ ಅದನ್ನು ಬಿಟ್ಟಳು.

ಸಂಜೆಯಾಯಿತು. ಅರಸು ಮಗಳು ತನ್ನ ಶಯನದ ಮೇಲೆ ಪವಡಿಸಿದಳು. ಮಂಡೂಕ ತಾನಿದ್ದ ಗೊಂದಿಯಿಂದ ಈಚೆಗೆ ಬಂದು, “ ನಾನು ತುಂಬಾ ದಣಿದಿದ್ದೇನೆ. ನನ್ನನ್ನು ಮೇಲಕ್ಕೆ ಕರೆದುಕೊಂಡು ನಿನ್ನ ಪಕ್ಕದಲ್ಲಿ ಮಲಗಿಸಿಕೋ. ಇಲ್ಲದಿದ್ದರೆ ನಿನ್ನ ತಂದೆಗೆ ತಿಳಿಸಿಬಿಟ್ಟೇನು ” ಎಂದು ನುಡಿಯಿತು.

ರಾಜಪುತ್ರಿಗೆ ಬಹು ಕೋಪ ಬಂತು. ಆ ಕೆಟ್ಟ ಕಪ್ಪೆಯನ್ನು ಕೈಯಿಂದ ಹಿಡಿದು ಮೇಲಕ್ಕೆತ್ತಿ “ ಇನ್ನು ನೀನು ಸುಮ್ಮನಿರುವೆಯಲ್ಲವೆ !” ಎಂದು ಹೇಳಿ, ತನ್ನ ಬಲವನ್ನೆಲ್ಲಾ ಉಪಯೋಗಿಸಿ ಅದನ್ನು ಗೋಡೆಯ ಮೇಲಕ್ಕೆ ಅಪ್ಪಳಿಸಿದಳು.

ಆದರೆ ಏನಾಯಿತು? ಮುದಿ ಕಪ್ಪೆ ಮಾಯವಾಗಿ ಹೋಗಿ, ಮುದ್ದು ಮೊಗದ ರಾಜಕುವರನೊಬ್ಬನು ಅಲ್ಲಿ ನಿಂತಿದ್ದನು. ಅವನನ್ನು ನೋಡಿದೊಡನೆಯೆ ಅವನ ಮೇಲೆ ಅವಳಿಗೆ ವಿಶೇಷ ಪ್ರೀತಿಯುಂಟಾಯಿತು. ಈ ಆಶ

ರ್ಯದ ಸಮಾಚಾರ ಜಾಗ್ರತೆ ದೊರೆಯ ಕಿವಿಗೆ ಬಿತ್ತು. ಆತನು ಅದನ್ನೆಲ್ಲ ಚೆನ್ನಾಗಿ ವಿಚಾರಿಸಿ ತಿಳಿದುಕೊಂಡನು. ಬಳಿಕ ಆತನ ಅಪ್ಪಣೆಯಂತೆ ಅವರಿಬ್ಬರಿಗೂ ಮದುವೆಯಾಯಿತು.

ಆ ರಾತ್ರಿ ಆ ಮದವಣಿಗ ಮದವಣಿಗಿತ್ತಿಯರು ಭೋಜನಾನಂತರ ತಾಂಬೂಲ ಸವಿಯುತ್ತ ವಿನೋದವಾಗಿ ಮಾತುಕತೆಯಾಡುತ್ತಿದ್ದಾಗ ಆತನು ಹೀಗೆಂದ :— "ಎಲೆ ನನ್ನ ರತ್ನವೆ, ನಾನು ಯಾರೋ ತಿಳಿದುಕೊಳ್ಳಬೇಕೆಂದು ನಿನಗೆ ಆಶೆಯಿಲ್ಲವೆ ?"

ಮೇರಿ :— ಇಲ್ಲದೆ ಉಂಟೆ ? ತುಂಬಾ ಆಶೆ. ಆದರೆ ಕೇಳುವುದಕ್ಕೆ ಸಂಕೋಚವಾಗಿತ್ತು, ಈಗ ಹೇಳಿ ಮತ್ತೆ ?

ರಾಜಕುಮಾರ :—ನಾನು ನಿಮ್ಮ ಪಕ್ಕದ ದೇಶದವನು. ಬೆಲ್ಜಿಯಂ ರಾಜರು ನನ್ನ ತಂದೆ. ನನ್ನ ಹೆಸರು ಚಾರ್ಲ್ಸಿ.

ಮೇರಿ :— ಆ ಮುದ್ದು ಚಾರ್ಲಿ ನೀವೇನೆ ? ಹಾಗಾದರೆ ನೀವು ಕಪ್ಪೆ ಏಕಾದಿರಿ ?

ಚಾರ್ಲಿ :— ಹೇಳುತ್ತೇನೆ, ಕೇಳು. ನಮ್ಮ ಘೆಂಟ್ ಪಟ್ಟಣದಲ್ಲಿ ಒಬ್ಬಾನೊಬ್ಬ ಮುದುಕಿಯಿದ್ದಳು ; ಅವಳು ಬಹು ಕುರೂಪಿ, ಬಹು ಸಿಡುಕಿ. ಅವಳನ್ನು ಕಂಡರೆ ಎಲ್ಲರಿಗೂ ಅಂಜಿಕೆ. ಕಂಡ ಕಂಡವರನ್ನೆಲ್ಲಾ ಹಣ ಕೇಳುವುದು, ಬಟ್ಟೆ ಕೇಳುವುದು ; ಅದು ಕೊಡು, ಇದು ಕೊಡು ಎನ್ನುವುದು ; ಕೊಡದವರನ್ನು ಬೈದು ಶಾಪವಿಡುವುದು—ಹೀಗೆ ಮಾಡುತ್ತಿದ್ದಳಂತೆ. ಅವಳು ಊರಿನ ಎಳೆ ಮಕ್ಕಳ ಮೇಲೆ ಮಂಕು ಬೂದಿ ಎರಚಿ ಅವರನ್ನು ಕದ್ದುಕೊಂಡು ಹೋಗುತ್ತಿದ್ದಳಂತೆ. ಇಂಥವಳು ನಮ್ಮ ಊರಿನಲ್ಲಿರಬಾರದೆಂದು ನಾನು ಅವಳನ್ನು ಅಲ್ಲಿಂದ ಹೊರಡಿಸುವಂತೆ ಊರು ಕಾವಲಿನವರಿಗೆ ಅಪ್ಪಣೆ ಮಾಡಿದೆ. ಅವಳು ಮಾಟಗಾತಿಯೆಂಬುದು ನನಗೆ ತಿಳಿದಿರಲಿಲ್ಲ. ನನ್ನ ಅಪ್ಪಣೆ ಅವಳಿಗೆ ತಿಳಿದ ಕೂಡಲೇ ಅವಳು ಕೋಪಗೊಂಡು ಏನೋ ಮಂತ್ರಹಾಕಿ ತಂತ್ರ ನಡಸಿದಳಂತೆ.

ಮೇರಿ :— ಆಮೇಲೆ ?

ಚಾರ್ಲಿ :— ಆ ರಾತ್ರಿ ನಾನು ಎಂದಿನಂತೆ ಅರಮನೆಯಲ್ಲಿ ನನ್ನ ಕೋಣೆಯಲ್ಲಿ ಮಲಗಿ ನಿದ್ರಿಸುತ್ತಿದ್ದಾಗ ಸರಿಹೊತ್ತಿನಲ್ಲಿ ಎಚ್ಚರವಾಗಿ ಬಾಯಾರಿಕೆ ತೋರಿತು. ಗಂಟಲೊಣಗಿಕೊಂಡು ಬಂತು. ಕುಡಿಯಲು ನೀರನ್ನು ಹುಡುಕಿಕೊಂಡು ಊಟದ ಮನೆಗೆ ಹೋದೆ. ಅಲ್ಲಿ ತುಟಿಗೆ ನೀರು ಸೋಕಿದ ಒಡನೆಯೆ ಮೈಯೆಲ್ಲ ಸರಸರನೆ ಸೇದಿಹೋಗಿ ನಾನು ಕಪ್ಪೆಯಾಗಿಬಿಟ್ಟೆ. ಕುಪ್ಪಳಿಸಿ ಕುಪ್ಪಳಿಸಿ ಜಲದಾರಿಯಲ್ಲಿ ದೂರಿ ಮನೆಯ ಹೊರಗಡೆಗೆ ಬಂದೆ. ಅಲ್ಲಿ ಆ ಮಾಟಗಾತಿ ಕಾದಿದ್ದಳು. ನನ್ನನ್ನು ಹಿಡಿದೆತ್ತಿಕೊಂಡು ಬೇಗ ಬೇಗ ನಡೆದು, ಅಲ್ಲಿಂದ ಬಂದು ನಿಮ್ಮೂರಿನ ಕೊಳದಲ್ಲಿ ನನ್ನನ್ನು ಬಿಟ್ಟಳು.

ಮೇರಿ:—ನಿಮ್ಮ ತಾಯಿ ತಂದೆ—

ಚಾರ್ಲಿ:—ಅವರು ಎಲ್ಲೆಲ್ಲೂ ಹುಡುಕಿ ಹುಡುಕಿ, ಹಂಬಲಿಸಿ, ಗೋಳಾಡಿ ಕಡೆಗೆ ಆ ಮುದುಕಿಯ ಬಳಿಗೇ ಹೋದರು. ಅವಳಿಗೆ ಸೊಗಸಾದ ತಿಂಡಿಗಳು, ಹಣ್ಣುಗಳು ಹೂವು, ಎಲೆ ಅಡಿಕೆ, ಜಲತಾರಿ, ಸೀರೆಗಳು, ಶಾಲುಗಳು, ಬೆಳ್ಳಿಯ ಪಾತ್ರೆಗಳು, ಚಿನ್ನದ ಒಡವೆಗಳು, ರಾಶಿಹಣ—ಇದನ್ನೆಲ್ಲಾ ಒಪ್ಪಿಸಿ ಕಣಿ ಕೇಳಿದರು. ಆಗ ಅವಳು ಕೊಂಚ ಹುಸಿನಗು ನಕ್ಕು—'' ನಿಮ್ಮ ಮಗ ಕಪ್ಪೆಯಾಗಿದ್ದಾನೆ–ಘೆಂಟ್ ಪಟ್ಟಣದ ಉತ್ತರ ಕಡೆಯ ಕೊಳದಲ್ಲಿ; ಬರ್ಲಿನ್ ದೊರೆ ಮಗಳು ಅದರಲ್ಲಿ ಚೆಂಡೆಸೆದಾಗ ಅವನು ಮೇಲಕ್ಕೆ ಬಂದು ಆ ಚೆಲುವೆಯ ಕೈ ಹಿಡಿಯುತ್ತಾನೆ '' ಎಂದು ಹೇಳಿದಳಂತೆ. ನೋಡಿದೆಯಾ ಈಗ ?

ಮೇರಿ:—ಆಹಾ ! ಎಂಥ ಸೋಜಿಗ !! ನನಗಂತೂ ಅದು ಒಳಿಯದೇ ಆಯಿತು.

ಚಾರ್ಲಿ:—ಆದದ್ದಾಯಿತು. ಇನ್ನು ಬೇಗ ನಮ್ಮ ಊರಿಗೆ ಹೋಗಬೇಕಲ್ಲವೆ ? ನನ್ನ ತಾಯೂ ತಂದೆಯೂ ಕೊರಗುತ್ತಿದ್ದಾರೆ. ಅವರನ್ನು ನೋಡಿ ಸಮಾಧಾನಪಡಿಸಬೇಕಲ್ಲವೆ ?

ಮೇರಿ:—ಪಾಪ ! ಎಷ್ಟು ಹಂಬಲಿಸಿಕೊಂಡಿದ್ದಾರೆಯೋ ! ನಾಳೆಯೇ ಅಲ್ಲಿಗೆ ಹೊರಡೋಣ. ಬೆಳಕು ಹರಿಯುತ್ತಲೆ ಹೊರಡೋಣ. ಅತ್ತೆಮಾವಂದಿರನ್ನು ನೋಡುವ ಆಶೆ ನನಗಿಲ್ಲವೆ ?

ಆ ರಾತ್ರಿ ರಾಜಕುವರನು ತನ್ನ ಹಿಂದಣ ಕಥೆಯನ್ನೂ, ಒಬ್ಬ ಕ್ರೂರಿಯಾದ ಮಂತ್ರಗಾತಿ ತನ್ನನ್ನು ಮಾಟದಿಂದ ಕಪ್ಪೆಯಾಗಿ ಮಾಡಿದ ಸಂಗತಿಯನ್ನೂ ತನ್ನನ್ನು ಆ ಅವಸ್ಥೆಯಿಂದ ತಪ್ಪಿಸುವುದಕ್ಕೆ ಮೇರಿ ರಾಜಕುವರಿಯೊಬ್ಬಳಿಂದ ಮಾತ್ರವೇ ಆಗುತ್ತಿತ್ತೆಂಬುದನ್ನೂ, ಮಾರನೆಯ ದಿನ ತನ್ನ ರಾಜ್ಯಕ್ಕೆ ತಾವಿಬ್ಬರೂ ಹೋಗಬಹುದೆಂಬುದನ್ನೂ— ತನ್ನ ಹೆಂಡತಿಗೆ ತಿಳಿಸಿದನು.

ಚಾರ್ಲಿ ಕೊಟ್ಟ ಆಜ್ಞೆಯಂತೆ ಆ ಮಾರನೆಯ ದಿನ ಅಂದವಾದ ಒಂದು ಸಾರೋಟು ಅವರಿದ್ದ ಅರಮನೆಯ ಮುಂದೆ ಬಂದು ನಿಂತಿತು. ಅದನ್ನು ಎಂಟು ಬಿಳಿಯ ಕುದುರೆಗಳು ಎಳೆಯುತ್ತಿದ್ದವು. ಅವಕ್ಕೆ ತಲೆಯ ಮೇಲೆ ಕೆಂಪು ರೆಕ್ಕೆಗಳಿಂದ ಅಲಂಕಾರವಾಗಿತ್ತು. ಅವಕ್ಕೆ ಹಾಕಿದ್ದ ಕಡಿವಾಣ ಮುಂತಾದ ಸಾಮಾನುಗಳು ಚಿನ್ನದಿಂದಲೂ ರತ್ನಗಳಿಂದಲೂ ಮಾಡಲ್ಪಟ್ಟಿದ್ದವು. ಆ ಕುದುರೆಗಳ ಪಕ್ಕದಲ್ಲಿ ಸ್ವಾಮಿಕಾರ್ಯ ಧುರಂಧರನಾದ "ಹ್ಯಾರಿ" ಎಂಬ ಸೇವಕನು ನಿಂತಿದ್ದನು. ಈ ಹ್ಯಾರಿಯು, ತನ್ನ ಯಜಮಾನನಾದ ರಾಜಕುವರನು ಕಪ್ಪೆಯಾಗಿ ಹೋದದ್ದನ್ನು ತಿಳಿದು ಆ ವ್ಯಸನದಿಂದ ತನ್ನ ಎದೆಗುಂಡಿಗೆ ಒಡೆದು ಹೋದೀತೆಂದು ಭಯಪಟ್ಟು, ಮೂರು ದೊಡ್ಡ ಕಬ್ಬಿಣದ ಪಟ್ಟಿಗಳನ್ನು ತನ್ನೆದೆಯ ಸುತ್ತಲೂ ಭದ್ರವಾಗಿ ಬಿಗಿದುಕೊಂಡಿದ್ದನು.

ಭೀಕರಾಜನೂ ರಾಜಕುಮಾರಿಯೂ ರಥದಲ್ಲಿ ಕುಳಿತು ಹೊರಟರು. ಸ್ವಲ್ಪ ದೂರ ಹೋಗುವಷ್ಟರೊಳಗಾಗಿ ಫಟ್! ಫಟ್! ಫಟ್! ಎಂದು ದೊಡ್ಡ ಸದ್ದಾಯಿತು. ರಾಜಕುವರನಿಗೆ ತನ್ನ ಆಳು ಕಬ್ಬಿಣದ ಪಟ್ಟಿಗಳನ್ನು ಹಾಕಿಕೊಂಡಿದ್ದ ಸಂಗತಿ ತಿಳಿದಿರಲಿಲ್ಲ. ಆತನು ಗಾಬರಿಯಿಂದ "ಹ್ಯಾರಿ, ರಥವು ಮುರಿದು ಹೋಗುತ್ತಿದೆಯೇನು?" ಎಂದು ಕೇಳಿದನು.

ಹ್ಯಾರಿಯು "ಇಲ್ಲ, ಮಹಾಸ್ವಾಮಿ, ತಾವು ಕಪ್ಪೆಯಾದಿರೆಂಬ ದುಃಖದಿಂದ ನನ್ನ ಹೃದಯ ಒಡೆದುಹೋಗದಂತೆ ಅದರ ಸುತ್ತಲೂ ಕಬ್ಬಿಣದ ಪಟ್ಟಿಗಳನ್ನು ಕಟ್ಟಿಕೊಂಡಿದ್ದೆನು. ಈಗ ತಾವು ತಮ್ಮ ಹಿಂದಿನ

ರೂಪಕ್ಕೆ ಬಂದು, ಚೆಲುವೆಯಾದ ಹೆಣ್ಣಿನೊಡನೆ ತಮ್ಮ ನಾಡಿಗೆ ಹಿಂದಿರುಗುತ್ತಿರುವ ಸಂತೋಷದಿಂದ ನನ್ನ ಹೃದಯ ಉಬ್ಬಿ ಆ ಪಟ್ಟಿಗಳು ಮುರಿದು ಹೋಗುತ್ತಿವೆ " ಎಂದು ಉತ್ತರಕೊಟ್ಟನು. ಇದಲ್ಲವೆ ಸ್ವಾಮಿಭಕ್ತಿ.

---

# ವಿಚಿತ್ರವಾದ ' ಚಾ ' ಪಾತ್ರೆ

---

ಜಪಾನ್ ದೇಶದ ಹೆಸರನ್ನು ನೀವು ಕೇಳಿದ್ದೀರಲ್ಲವೆ ? ಆ ದೇಶವು ನಮ್ಮ ಇಂಡಿಯಾ ದೇಶದಂತೆಯೇ ಭೂಗೋಳದ ಪೂರ್ವಾರ್ಧಭಾಗದಲ್ಲಿದೆ. ಏಷ್ಯಾ ಖಂಡಕ್ಕೇ ಸೇರಿದೆ. ಈ ಎರಡು ದೇಶಗಳ ಜನರ ನಡತೆಗಳೂ ಕೊಂಚ ಹೆಚ್ಚು ಕಡಮೆ ಒಂದನ್ನೊಂದು ಹೋಲುತ್ತವೆ. ನಮ್ಮ ದೇಶದಲ್ಲಿ ಹುಟ್ಟಿದ ಗೌತಮಬುದ್ಧನ ಮತವನ್ನೇ ಅಲ್ಲಿನ ಬಹುಮಂದಿ ಅನುಸರಿಸಿದ್ದಾರೆ. ಹೀಗೆ ನಮಗೂ ಜಪಾನರಿಗೂ ಅನೇಕ ಬಗೆಯ ಸಂಬಂಧಗಳುಂಟು. ಆದರೆ ಇನ್ನು ಕೆಲವು ವಿಷಯಗಳಲ್ಲಿ ಸದ್ಯಃ ನಮಗಿಂತಲೂ ಅವರು ಶಕ್ತರು ಮತ್ತು ಸಾಹಸಿಗಳು. ಅವರಲ್ಲಿ ವಿಧ ವಿಧವಾದ ಕಸಬುಗಳೂ ಕೈಗಾರಿಕೆಗಳೂ ಅಭಿವೃದ್ಧಿ ಹೊಂದಿವೆ.

ಬಹುಕಾಲದ ಹಿಂದೆ—ಎಷ್ಟು ಹಿಂದೆಯೋ ಯಾರೂ ಹೇಳಲಾರರು,—ಜಪಾನ್ ದ್ವೀಪದ ಒಂದೂರಿನಲ್ಲಿ " ಮೋರಿಂಜಿ " ಎಂಬ ದೇವರ ಗುಡಿಯೊಂದಿತ್ತು. ಆ ಗುಡಿಯಲ್ಲಿ ಮುದುಕನಾದ ಪೂಜಾರಿಯೊಬ್ಬನಿದ್ದನು. ಅವನಿಗೆ " ಚಾ *" ಯೆಲೆಯ ಕಷಾಯವನ್ನು ಕಾಸಿ ಕುಡಿಯುವುದರಲ್ಲಿ ಬಲು ಪ್ರೀತಿ. ಹೀಗೆ " ಚಾ " ಕಾಸಿ, ಇಷ್ಟ ಮಿತ್ರರೊಡನೆ ಕುಡಿಯುವ ಹಬ್ಬಕ್ಕೆ " ಚಾ-ನೋಯು " ಎಂದು ಹೆಸರಂತೆ.

---

*" ಚಾ " – " ತೇ " ಎಲೆಗೆ ಇಂಗ್ಲಿಷಿನಲ್ಲಿ " ಟೀ " ಎಂದೂ ಇಂಡಿಯಾ ದೇಶದ ಭಾಷೆಗಳಲ್ಲಿ " ಚಹಾ " ಎಂದೂ " ಚಾ " ಎಂದೂ ಹೆಸರು.

ಒಂದು ದಿನ ಮೋರಿಂಜಿ ದೇವರ ಅರ್ಚಕನು ಪೇಟೆಗೆ ಹೋಗಿ, ಒಂದು ಹಳೆಯ ಸಾಮಾನುಗಳ ಅಂಗಡಿಯಲ್ಲಿ ಏನೋ ಹುಡುಕಾಡುತ್ತಿದ್ದಾಗ ಅವನಿಗೆ 'ಚಾ' ಕಾಸುವ ತಪ್ಪಲೆಯೊಂದು ಅಕಸ್ಮಾತ್ತಾಗಿ ಸಿಕ್ಕಿತು. ಆತನು ಅದನ್ನು ಈ ಕಡೆ ತಿರುಗಿಸಿ, ಆ ಕಡೆ ತಿರುಗಿಸಿ, ಹೀಗೆ ನೋಡಿ, ಹಾಗೆ ನೋಡಿ, ಅದರ ಅಂದದಿಂದಲೂ ಮಾಟದಿಂದಲೂ ತುಂಬಾ ಸಂತೋಷಪಟ್ಟನು. ಅದನ್ನು ಕೊಂಡುಕೊಳ್ಳಬೇಕೆಂದು ಅವನಿಗೆ ಆಶೆಯಾಯಿತು. ಒಡನೆಯೆ ಅವನು ವ್ಯಾಪಾರ ಮಾಡಿ, ಆ ವಸ್ತುವನ್ನು ಸ್ವಾಧೀನ ಪಡಿಸಿಕೊಂಡು ಮನೆಗೆ ಹಿಂದಿರುಗಿದನು.

ಯಾವಾಗ ನೋಡಿದರೂ ಅವನಿಗೆ ಅದರ ಮೇಲೆಯೇ ಗಮನ; ಮೂರು ಹೊತ್ತೂ ಅದನ್ನು ಮುಂದಿರಿಸಿಕೊಂಡು ಕುಳಿತಿರುವನು. ಎರಡು ಮೂರು ದಿನಗಳು ಹೀಗೆ ಅದನ್ನು ನೋಡಿ ನೋಡಿ, ಸಂತೋಷದಿಂದ ಮೈಯುಬ್ಬಿ, " ಇದೆಷ್ಟು ಸುಂದರವಾಗಿದೆ! ಬೇಗನೆ ನಾನೊಂದುದಿನ "ಚಾ-ನೋಯು" ಉತ್ಸವವನ್ನು ಏರ್ಪಡಿಸಿ, ನನ್ನ ಸ್ನೇಹಿತರೆಲ್ಲರನೂ ಬರಮಾಡಿಕೊಳ್ಳುತ್ತೇನೆ. ಈ ಪಾತ್ರೆಯನ್ನು ನೋಡಿ ಅವರು ಆಶ್ಚರ್ಯಪಡದೇ ಇರುತ್ತಾರೆಯೆ ? " ಎಂದು ಅಂದುಕೊಂಡನು.

ಆ ರಾತ್ರಿ ಅವನು ಆ ಪಾತ್ರೆಯನ್ನು ಒಂದು ಮೂಗಾಲು ಮಣೆಯ ಮೇಲಿಟ್ಟು ಅದನ್ನು ನೋಡಿ ಹೊಗಳುತ್ತಾ, "ಚಾ-ನೋಯು" ಹಬ್ಬದ ಏರ್ಪಾಟನ್ನು ಯೋಚಿಸುತ್ತಾ, ಅದರ ಪಕ್ಕದಲ್ಲಿ ಹಾಸಿಗೆಯಮೇಲೆ ಕುಳಿತನು. ಹಾಗೆಯೇ ಅವನ ಕಣ್ಣಿಗೆ ನಿದ್ದೆ ಹತ್ತಿತು. ಕ್ರಮೇಣ ಕಣ್ಣುಗಳು ಮಂಕಾದವು. ತಲೆ ತೂಗಾಡಲು ಮೊದಲಾಯಿತು. ಕಡೆಗೆ ಅವನು ತೂಕಡಿಸಿ ಹಾಸಿಗೆಯಮೇಲೆ ಬಿದ್ದು, ಗಾಢನಿದ್ರೆಗೆ ಒಳಗಾದನು.

ಆಮೇಲೆ ಒಂದು ವಿಚಿತ್ರವಾದ ಸಂಗತಿ ನಡೆಯಿತು. ಆ ಚಾ ತಪ್ಪಲೆ ತಾನಿದ್ದ ಸ್ಥಳದಿಂದ ಜರುಗುವುದಕ್ಕೆ ಪ್ರಾರಂಭಿಸಿತು. ಅದರ ಬಾಯಮೇಲುಗಡೆ ಒಂದು ತಲೆ ಕಾಣಿಸಿಕೊಂಡಿತು. ಅದರ ಹಿಡಿಕೆ ಉದ್ದವಾದ ಕೂದಲುಳ್ಳ ಒಂದು ಬಾಲವಾಯಿತು. ಅದಕ್ಕೆ ನಾಲ್ಕು ಕಾಲುಗಳೂ ಹುಟ್ಟಿಕೊಂಡವು. ಅದರ ಮೇಲು ಭಾಗದಲ್ಲೆಲ್ಲಾ ಕ್ರಮೇಣ ಕೂದಲು

ಗಳುಂಟಾದವು. ಕಡೆಗೆ ಅದು ಮೂಗಾಲು ಮಣೆಯಿಂದ ಕೆಳಕ್ಕೆ ಹಾರಿ, ಮನೆಯೆಲ್ಲಾ ಓಡಾಡಲು ಮೊದಲು ಮಾಡಿತು.

ಆ "ಮೋರಿಂಜಿ" ದೇವಸ್ಥಾನದ ಇನ್ನೊಂದು ಪ್ರಾಕಾರದಲ್ಲಿ ಮಲಗಿದ್ದ ಮೂರು ಮಂದಿ ಭಕ್ತರು ಈ ಕುಣಿದಾಟದ ಸದ್ದಿನಿಂದ ಎಚ್ಚೆತ್ತು, ಅದೇನೆಂದು ತಿಳಿಯುವುದಕ್ಕಾಗಿ ಅರ್ಚಕನಿದ್ದ ಕೋಣೆಯ ಬಳಿಗೆ ಬಂದರು. ಅವರಲ್ಲೊಬ್ಬನು ಬಾಗಿಲ ಸಂದಿನಲ್ಲಿ ಇಣಿಕಿ ನೋಡಿದನು. ಒಳಗಿನ ಅದ್ಭುತವನ್ನು ಕಂಡು ಆಶ್ಚರ್ಯಪರವಶನಾಗಿ " ಹೋ ! ಇದೇನು ! ಚಾ ತಪ್ಪಲೆ ಕರಡಿಯಾಗಿಬಿಟ್ಟಿದೆ ! " ಎಂದು ಅರಚಿದನು.

ಇನ್ನೊಬ್ಬನು—" ಹಾಗಂದರೇನು ! ಚಾ ತಪ್ಪಲೆ ಕರಡಿಯಾಗುವುದುಂಟೆ ? ನಿನಗೇನು ಹುಚ್ಚೋ ! " ಎಂದು ಕೂಗಿಕೊಳ್ಳುತ್ತಾ ಅವನನ್ನು ಈಚೆಗೆಳೆದು, ತಾನೂ ಇಣಿಕಿ ನೋಡಿದನು. ನೋಡುತ್ತಲೆ ಭಯಪಟ್ಟು, " ಇದು ಪಿಶಾಚವಯ್ಯಾ ! ನಮ್ಮ ಕಡೆಯೇ ಬರುತ್ತಿದೆ! ಇನ್ನೇನು ಗತಿ ? ಓಡೋಣ !!" ಎಂದು ಕಿರಿಚಿಕೊಂಡನು.

ಮೂರನೆಯವನು ಮಾತ್ರ ಭಯಪಡದೆ. " ಇದೇನೋ ವಿನೋದವಾಗಿದೆ. ಆಗಲಿ, ಅರ್ಚಕನನ್ನೆಬ್ಬಿಸೋಣ " ಎಂದು ಹೇಳಿ, ಕದವನ್ನು ನೂಕಿ ಒಳಕ್ಕೆ ಹೋಗಿ, ಅರ್ಚಕನನ್ನು ಗಟ್ಟಿಯಾಗಿ ಕೂಗಿ, ಕದಲಿಸಿ, ಎಬ್ಬಿಸಿದನು.

ಆ ಮುದುಕ ಕಣ್ಣುಗಳನ್ನುಜ್ಜಿಕೊಂಡು " ಏನು ಗದ್ದಲವಯ್ಯಾ ಇದು ? ಏನು ಅವಾಂತರವಯ್ಯಾ ನಿಮ್ಮದು? " ಎಂದು ಗೊಣಗಿದನು. ಮೇಲಕ್ಕೇನೋ ಏಳಲಿಲ್ಲ. ಅವರು " ಕಣ್ಣು ಬಿಟ್ಟು ಈ ವಿಚಿತ್ರವನ್ನು ನೋಡಿರಯ್ಯ ಇದು ಗದ್ದಲವಲ್ಲದೆ ಇನ್ನೇನು ? " ಎಂದು ಹೇಳಿದರು.

ಮುದುಕ :—" ಏನಯ್ಯಾ ಅದು ? "

ಅವರು :—" ನಿಮ್ಮ ಚಾ ತಪ್ಪಲೆಗೆ ಕಾಲುಗಳು ಬಂದಿದೆ ; ಅದು ಓಡಾಡುತ್ತಿದೆ. "

ಮುದುಕ :—" ಏನೂ ? ನಿದ್ದೆಗಣ್ಣಿನಲ್ಲಿದ್ದೀರೋ ಹೇಗೆ ? ಏನು ಮಾತಾಡುತ್ತೀರಿ ? ಚಾ ತಪ್ಪಲೆಗೆ ಕಾಲು ಬರುವುದಂದರೆ ಏನು ? "

ಅವರು :—“ ಏನೋ ಎದ್ದು ಕಣ್ಣು ತೆರೆದು ನೋಡಿದರೆ ಗೊತ್ತಾ ದೀತು. ”

ಮುದುಕಯ್ಯ ಎದ್ದು ಚೆನ್ನಾಗಿ ಕಣ್ಣುಬಿಟ್ಟು ನೋಡುವ ವೇಳೆಗೆ, ಚಾ ತಪ್ಪಲೆ ತನ್ನ ಹಿಂದಿನ ರೂಪವನ್ನು ಹೊಂದಿ ಮೂಗಾಲು ಮಣೆಯ ಮೇಲೆ ಸುಮ್ಮನೆ ಕೂತಿತ್ತು.

ಅವನು, “ ನೀವೆಂತಹ ಹುಚ್ಚರಯ್ಯಾ ! ಒಳ್ಳೆಯ ನಿದ್ದೆಯ ಹೊತ್ತಿನಲ್ಲಿಯೂ ಹುಡುಗಾಟವೆ ? ಬಿದ್ದು ನಿದ್ದೆಹೋಗಿ. ನನ್ನ ಚಾ ತಪ್ಪಲೆಗೇನೂ ಅಪಾಯವಿಲ್ಲ. ನೀವು ಚೆಕ್ಕಿಗೆ ಜ್ವರ ಬರುವ ಮಾತನ್ನಾಡಿದರೆ ನಾನು ನಂಬುತ್ತೇನೆಯೆ ? ” ಎಂದು ಗದರಿಸುತ್ತ ಪುನಃ ಮಲಗಿ, ನಿದ್ರಾಪರವಶನಾದನು.

ಮರುದಿನ ಬೆಳಗಾಯಿತು. ಆ ದಿನವನ್ನೂ ಅರ್ಚಕನು ಚಾ ತಪ್ಪಲೆಯ ಕೊಂಡಾಟದಲ್ಲಿಯೇ ಕಳೆದನು. ಆ ಸಾಯಂಕಾಲ ಅವನಿಗೆ ಆ ತಪ್ಪಲೆಯಲ್ಲಿ ಚಾ ಕಾಸಿ ರುಚಿ ನೋಡಬೇಕೆಂದು ಬಹು ಅಪೇಕ್ಷೆಯಾಯಿತು. ಕೂಡಲೆ ಅವನು ಅದರಲ್ಲಿ ನೀರು ತುಂಬಿ ಬೆಂಕಿಯಮೇಲಿಟ್ಟನು. ನೀರು ಕುದಿಯಲು ಮೊದಲಾಗುತ್ತಲೇ ತಪ್ಪಲೆ —

“ ಬಿಸಿ, ಬಿಸಿ, ” ಎಂದು ಕೂಗಿ ಬೆಂಕಿಯಿಂದ ಹಜಿಗೆ ಹಾರಿತು.

ಅರ್ಚಕ—“ ಅಯ್ಯೋ ! ಇದೇನು ! ಅಯ್ಯೋ ! ಇದೇನು ? ” ಎಂದು ಕಿರಿಚಿದನು.

ಹಿಂದಿನ ರಾತ್ರಿಯ ಭಕ್ತರು ಈಗಲೂ ಅಲ್ಲಿಗೆ ಓಡಿಬಂದರು. ಅವರು ಬರುವ ಸಮಯಕ್ಕೆ ತಪ್ಪಲೆ ತನ್ನ ರೂಪವನ್ನು ಹೊಂದಿ ಕದಲದೆ ಇತ್ತು. ಅವರಲ್ಲೊಬ್ಬನು ಕೋಪಗೊಂಡು, “ ಇದು ಬದುಕಿದೆಯೊ ಇಲ್ಲವೆ ? ನಾನು ನೋಡುತ್ತೇನೆ ” ಎಂದು ಹೇಳುತ್ತಾ, ಒಂದು ಕಟ್ಟಿಗೆಯನ್ನು ತೆಗೆದುಕೊಂಡು ಆ ಪಾತ್ರೆಗೆ ಬಲವಾಗಿ ಪೆಟ್ಟಿಕ್ಕಿದನು. ಆದರೆ ಲೋಹದ ಶಬ್ದಮಾತ್ರವೇ ಕೇಳಬಂದಿತು.

ಅರ್ಚಕನು ಈ ವಿಲಕ್ಷಣದ ಪಾತ್ರೆಯನ್ನು ಏನು ಮಾಡಬೇಕೆಂದು ಚಿಂತಿಸುತ್ತ ಕುಳಿತನು. ಕೊಂಚ ಹೊತ್ತಿನಮೇಲೆ ಕೋಳಿ ಕೂಗಿತು,

ಕಾಗೆಯೂ ಕೂಗಿತು. ಆ ಮೇಲೆ ಒಡಕು ಪಾತ್ರೆಗಳನ್ನು ಸರಿಮಾಡುವ ಪಂಚಾಳನೊಬ್ಬನು ಆ ದಾರಿಯಲ್ಲಿ "ಒಡಕುಪಾತ್ರೆ ಸರಿಮಾಡೋದೂ—ಒಡಕುಪಾತ್ರೆ" ಎಂದು ಒರಲುತ್ತಾ ತನ್ನ ಸುದ್ದಿಯನ್ನು ಸಾರಿಕೊಂಡು ಬಂದನು.

ಇರುಳೆಲ್ಲ ನಿದ್ದೆಯಿಲ್ಲದೆ ಕಳವಳಿಸುತ್ತಿದ್ದ ಆ ಮುದಿಗೊಡ್ಡು ಅವನ ಸ್ವರವನ್ನು ಕೇಳಿ, "ಈ ಪೀಡೆಯನ್ನು ಅವನತಲೆಗೆ ಕಟ್ಟಿಬಿಡುತ್ತೇನೆ. ಅವನಾದರೆ ಇದನ್ನು ಕತ್ತರಿಸಿ ಕರಗಿಸಿಬಿಡುತ್ತಾನೆ, ಅಥವಾ ಇನ್ನಾರಿಗಾದರೂ ಮಾರಿಬಿಡುತ್ತಾನೆ" ಎಂದು ತೀರ್ಮಾನಿಸಿಕೊಂಡನು. ಕೂಡಲೆ ಅವನು ಲೋಹಗಾರನನ್ನು ಒಳಕ್ಕೆ ಕರೆದು, ಆ ತುಂಟ ತಪ್ಪಲೆಯನ್ನು ತೋರಿಸಿದನು. ಲೋಹಗಾರನು ತನಗೇನೋ ಐಶ್ವರ್ಯ ದೊರೆಯಿತೆಂದು ಅದನ್ನು ಕೊಂಡುಕೊಂಡನು. ಅವನು ಎಷ್ಟುಕೊಟ್ಟರೆ ಅಷ್ಟೇ ಸಾಕೆಂದಿದ್ದ ಅರ್ಚಕನು ಬೆಲೆಯ ವಿಷಯದಲ್ಲಿ ಏನೂ ಜಗಳವಾಡಲಿಲ್ಲ.

ಪೂಜಾರಿಯಂತೆಯೇ ಪಂಚಾಳನೂ ಅದನ್ನು ಬಹಳವಾಗಿ ಕೊಂಡಾಡಿ, ಎಡೆಬಿಡದೆ ಅದನ್ನು ಪಕ್ಕದಲ್ಲಿಟ್ಟುಕೊಂಡಿರುತ್ತಿದ್ದನು. ಆ ದಿನ ರಾತ್ರಿ ಅವನಿಗೂ ನಿದ್ರಾಭಂಗವಾಯಿತು. ಅವನು ಕಣ್ದೆರೆದು ನೋಡುವಹೊತ್ತಿಗೆ ಯಾವ ವಿಶೇಷವೂ ಇರಲಿಲ್ಲ.

"ಇದೇನೋ ಕನಸು!" ಎಂದಂದುಕೊಂಡು ಅವನು ಪುನಃ ಕಣ್ಣು ಮುಚ್ಚಿದನು.

ಮರಳಿ ಯಾರೋ, "ಏನಯ್ಯಾ, ಪಂಚಾಳಾಚಾರಿ ಏಳಯ್ಯಾ" ಎಂದ ಹಾಗಾಯಿತು.

ಅವನೆದ್ದು ಕಣ್ಣು ಬಿಡುವಾಗ ಚಾ ತಪ್ಪಲೆಯು ತಲೆ ಬಾಲ ಕಾಲು ಕೂದಲುಗಳಿಂದ ಕೂಡಿ, ಕರಡಿಯ ರೂಪದಿಂದ ಮನೆಯೆಲ್ಲಾ ಹಾರಾಡುತಿತ್ತು.

"ಅಯ್ಯೋ! ಪಿಶಾಚ! ದೆವ್ವ!" ಎಂದು ಲೋಹಕಾರನು ಕೂಗಿಟ್ಟನು.

ತಪ್ಪಲೆ ಗಟ್ಟಿಯಾಗಿ ಹಲ್ಲುಕಿರಿದು ನಗುತ್ತಾ, “ ಮಿತ್ರನೆ, ಅಂಜ ಬೇಡ. ನಾನು ದೆವ್ವವಲ್ಲ, ನಾನೊಂದು ವಿಚಿತ್ರವಾದ ಪಾತ್ರೆ ನನ್ನ ಹೆಸರು “ ಬುಂಬುಕು–ಚಾ–ಗಮ. ” ನನ್ನನ್ನು ವಿಶ್ವಾಸದಿಂದ ಕಾಣು ವವರಿಗೆ ನಾನು ಒಳ್ಳೆಯ ಅದೃಷ್ಟವನ್ನು ಕೊಡುತ್ತೇನೆ. ಆದರೆ ದೇವ ಸ್ಥಾನದಲ್ಲಿ ಮಾಡಿದಂತೆ ನನ್ನನ್ನು ಬೆಂಕಿಯಮೇಲಿಟ್ಟು, ಕಟ್ಟಿಗೆಯಿಂದ ಹೊಡೆದರೆ ನನಗೆ ಸರಿಬೀಳುವುದಿಲ್ಲ ” ಎಂದು ಹೇಳಿತು.

“ ಏನುಮಾಡಿದರೆ ನಿನಗೆ ಸಂತೋಷ ? ನಿನ್ನನ್ನು ಒಂದು ಪೆಟ್ಟಿ ಗೆಯಲ್ಲಿಡಲೆ ? ” ಎಂದು ಲೋಹಗಾರ ಕೇಳಿದನು.

“ ಬೇಡ, ಬೇಡ. ನನಗೆ ಒಳ್ಳೆಯ ತಿಂಡಿಯನ್ನುಕೊಡು, ಕುಡಿ ಯುವುದಕ್ಕೆ ಪಾನಕ ಕೊಡು. ಇಷ್ಟೊಂದು ನೀನು ಮಾಡಿದರೆ ನಾನು ಅದಕ್ಕೆ ಪ್ರತಿಯಾಗಿ ಉಪಕಾರ ಮಾಡುತ್ತೇನೆ. ನಿನ್ನ ಸಾಲವನ್ನು ನಾನಿಟ್ಟುಕೊಳ್ಳುವುದಿಲ್ಲ. ” ಎಂದು ತಪ್ಪಲೆ ಉತ್ತರ ಕೊಟ್ಟಿತು.

ಲೋಹಗಾರ ಅದಕ್ಕೊಪ್ಪಿದನು.

ಮಾರನೆಯದಿನ ಬುಂಬುಕು–ಚಾ–ಗಮನಿಗೆ ಭಾರಿ ಔತಣವಾ ಯಿತು. ಅನಂತರ ಆತನು ತನ್ನ ಅನ್ನದಾತನನ್ನು ಕುರಿತು, “ ಅಯ್ಯಾ, ನನ್ನಲ್ಲಿ ಅನೇಕ ವಿದ್ಯೆಗಳುಂಟು. ನೀನು ನನ್ನನ್ನು ಕರ ದುಕೊಂಡು ದೇಶದ ಮೇಲೆ ಹೊರಟರೆ, ನಾನು ನನ್ನ ಚಮತ್ಕಾರ ವನ್ನು ಪ್ರಕಾಶವಾಗಿ ತೋರಿಸುತ್ತೇನೆ. ಅದನ್ನು ನೋಡಲು ಅನೇ ಕರು ಬರುತ್ತಾರೆ. ಅವರು ತೆರುವ ತೆರಿಗೆಯಿಂದ ನೀನು ಹಣಗಾರ ನಾಗುತ್ತೀ ” ಎಂದನು.

ಲೋಹಗಾರ ಈ ಬುದ್ಧಿವಾದವನ್ನು ಸ್ವೀಕರಿಸಿ, ಬುಂಬುಕು–ಚಾ–ಗಮನಿಗೆ ತಾಳ ಮೇಳಗಳನ್ನು ಜೊತೆಗೊಳಿಸಿ, ಊರೂರಲ್ಲಿಯೂ ಆಟವಾಡಿಸಲು ಮೊದಲುಮಾಡಿದನು. ಚಾ–ಗಮನ ಅದ್ಭುತವಾದ ಕೆಲಸಗಳನ್ನು ನೋಡಲು ದಿನೇ ದಿನೇ ಜನರು ಹೆಚ್ಚು ಹೆಚ್ಚಾಗಿ ಬಂದರು. ಓಡುವುದು, ಹಗ್ಗದಮೇಲೆ ಕುಣಿಯುವುದು, ಕೊಡೆ ಹಿಡಿ ದುಕೊಳ್ಳುವುದು, ಗರಡೀ ಸಾಮು ಮಾಡುವುದು, ಲಾಗ ಹಾಕು

ವುದು ಮುಂತಾದ ಸಾಹಸಗಳನ್ನೆಲ್ಲಾ ಬುಂಬುಕು–ಚಾ–ಗಮನು ಬಹು ಸುಲಭವಾಗಿ, ನೋಟಕರಿಗೆ ವಿನೋದವಾಗುವಂತೆಯೂ ಆಶ್ಚರ್ಯವಾಗು ವಂತೆಯೂ ಮಾಡಿ, ಎಲ್ಲವೂ ಆದಮೇಲೆ ಮರ್ಯಾದೆಯಿಂದ ಪ್ರೇಕ್ಷಕರಿಗೆ ತಲೆಬಾಗಿ, ಅವರ ದಯೆಯಿರಬೇಕೆಂದು ಹೇಳಿ, ಪರದೆಯ ಹಿಂದಕ್ಕೆ ತೆರಳುತ್ತಿದ್ದನು.

ಈ ಚಾ–ಗಮನ ಆಟದ ಕೀರ್ತಿ ನಾಡಿನಲ್ಲೆಲ್ಲ ಹರಡಿತು. ಆ ಲೋಹಗಾರನನ್ನು ತಮ್ಮ ತಮ್ಮ ಊರಿಗೆ ಕರೆಸಿಕೊಳ್ಳಲು ಎಲ್ಲರೂ ಪ್ರಯತ್ನ ಪಡುತ್ತಿದ್ದರು. ಕೊನೆಗೆ ಶ್ರೀಮಂತರೂ, ರಾಜಕುಲದವರೂ ಕೂಡ ಆ ಆಟಗಳನ್ನಾಡಿಸಿ ನೋಡಿ, ಲೋಹಗಾರನಿಗೆ ಬಹುಮಾನ ಮಾಡಿದರು.

ಆ ಪಂಚಾಳನು ಹೀಗೆ ಹಣ ಸಂಪಾದಿಸಿ ಸಂಪಾದಿಸಿ ಬೇಸತ್ತು ಆ ಹಣವನ್ನು ಏನು ಮಾಡುವುದೆಂಬುದು ತೋಚದೆ, ತಾನೂ ತನ್ನ ಚಾ–ಗಮನೂ ವಿಶ್ರಾಂತಿ ಪಡೆಯಬೇಕೆಂದು ನಿಶ್ಚಯಿಸಿ, ಆ ಚಾ ತಪ್ಪಲೆಯನ್ನು ಮೋರಿಂಜಿಯ ದೇವಸ್ಥಾನದ ಒಂದು ಮಂಟಪದಲ್ಲಿರಿಸಿ, ಅದರ ಸೇವೆಗೋಸ್ಕರ ಬೇಕಾದಷ್ಟು ಹಣವನ್ನು ಕೊಟ್ಟು, ತಾನೂ ನಿಶ್ಚಿಂತೆಯಿಂದ ಸುಖವಾಗಿ ಬಾಳಿದನು. ಸಾವಿರಾರು ಜನರು ಆಮೇಲೆಯೂ ಚಾ–ಗಮನ ದರ್ಶನಕ್ಕೋಸ್ಕರ ಮೋರಿಂಜಿಯ ದೇವಾಲಯಕ್ಕೆ ಬರುತ್ತಿದ್ದರು. ಅನೇಕರು ಆತನನ್ನು ಒಬ್ಬ ಮಹಾತ್ಮನೆಂದು ಭಾವಿಸಿ ಆ ಪಾತ್ರೆಯನ್ನು ಪೂಜಿಸುತ್ತಿದ್ದರು.

---

# ಮೂಗು ಕಣ್ಣುಗಳ ಜಗಳ

---

ಮನುಷ್ಯರು ಸುಲೋಚನಗಳನ್ನು ಧರಿಸಿಕೊಳ್ಳಲು ಮೊದಲು ಮಾಡಿದ ಕೊಂಚ ಕಾಲದ ಮೇಲೆ ಮೂಗಿಗೂ ಕಣ್ಣಿಗೂ ಪ್ರಬಲವಾದ ವ್ಯಾಜ್ಯವೊಂದು ಹುಟ್ಟಿತು.

" ಸುಲೋಚನ ನಿರ್ಮಾಣವಾದದ್ದು ಯಾರಿಗೋಸ್ಕರ ? ನನಗೆ ಅಲಂಕಾರವಾಗಿರುವುದಕ್ಕೋಸ್ಕರ. ನಾನಿಲ್ಲದಿದ್ದರೆ ಅದನ್ನಿಡುವುದೆಲ್ಲಿ ? ಎಲೆ ಕಣ್ಣೆ, ನೀನು ಕಳ್ಳನಂತೆ ನನ್ನ ಒಡವೆಯಿಂದ ಪ್ರಯೋಜನ ಹೊಂದು ತ್ತಿದ್ದಿ," ಎಂದು ಮೂಗು ಕಣ್ಣನ್ನು ಹೀಯಾಳಿಸಿತು.

ಕಣ್ಣಾದರೋ— " ಹಾಗಲ್ಲ, ನನಗೆ ಸಹಾಯವಾಗಿದ್ದುಕೊಂಡು ನನ್ನನ್ನು ಸೇವಿಸುವುದು ಕನ್ನಡಕದ ಕೆಲಸ. ಅದನ್ನು ಹೊತ್ತಿರುವುದು ನಿನ್ನ ಕೆಲಸ. ಆದಕಾರಣ ನೀನು ನನ್ನ ದಾಸಾನುದಾಸ " ಎಂದು ಮೂಗಿಗೆ ಉತ್ತರ ಹೇಳಿತು.

ಹೀಗೆ ಅನೇಕ ಮಾತು ಕಥೆಗಳು ನಡೆದು, ದೊಡ್ಡ ಕಲಹವೇ ಆಗಿ, ಕಡೆಗೆ ಎರಡೂ ತಮ್ಮ ತಮ್ಮ ನ್ಯಾಯವನ್ನು ಕಿವಿಯಬಳಿ ಹೇಳಿಕೊಂಡವು. ಕಿವಿಯೇ ನ್ಯಾಯಾಧಿಪತಿಯಾಗಿದ್ದು ಈ ವ್ಯಾಜ್ಯವನ್ನು ತೀರ್ಮಾನಿಸಬೇಕೆಂದು ಎರಡು ಪಕ್ಷಗಳೂ ಒಪ್ಪಿಕೊಂಡವು.

ಗಟ್ಟಿಗನಾದ ನ್ಯಾಯವಾದಿಯು (ಲಾಯರು) ಇಲ್ಲದಿದ್ದರೆ ತಮಗೆ ನ್ಯಾಯ ದೊರೆಯಲಾರದೆಂದು ಕಕ್ಷಿಗಳೆರಡೂ ತಿಳಿದಿದ್ದವು. ಅದಕ್ಕಾಗಿ ಮೂಗು ಮಾತುಬಲ್ಲ ನಾಲಗೆಯ ಬಳಿಗೆ ಬಂದು, ಅದನ್ನು ಸ್ತುತಿಸಿ ತನಗೂ ಅದಕ್ಕೂ ಇದ್ದ ಸಂಬಂಧವನ್ನೂ, ಅದಕ್ಕೆ ಬೇಕಾದ ಪದಾರ್ಥವನ್ನು ಮೊದಲೇ ತಾನು ವಾಸನೆಯಿಂದ ತಿಳಿಯುತ್ತಿದ್ದ ಸಂದರ್ಭವನ್ನೂ ವಿವರಿಸಿ ಅದರ ಸಹಾಯವನ್ನು ಕೇಳಿತು. ಮೂಗು ನಾಲಗೆಯು ಕೇಳಿದ ವೇತನವನ್ನು ಕೊಟ್ಟ ಮೇಲೆ, ಜಾಣ್ಮೆಯುಳ್ಳ ನಾಲಗೆ " ನಿಮ್ಮ ಸಮಯಕ್ಕೆ ನಾನು ಸಿದ್ಧವಾಗಿದ್ದೇನೆ " ಎಂದು ಮಾತು ಕೊಟ್ಟಿತು.

ಆಮೇಲೆ ಕಣ್ಣೂ ನಾಲಗೆಯ ಬಳಿಗೇ ಬಂದಿತು. ಏಕೆಂದರೆ ವಾಚಾಳಿಯಾದ ನ್ಯಾಯವಾದಿಯು ನಾಲಗೆಯೊಂದೇ. ಆದರೆ, ಕಣ್ಣು ಮೂಗಿಗಿಂತಲೂ ನಾಲಗೆಗೆ ದೂರವಾಗಿರುವುದರಿಂದ, ಅದು ಬರುವುದು ತಡವಾಯಿತು. ಕಣ್ಣೂ ಏನೇನೋ ಹೇಳಿಕೊಂಡಿತು. ನಾಲಗೆ ಅದಕ್ಕೂ ಒಳ್ಳೆಯಮಾತು ಹೇಳಿ, ಅದರಿಂದಲೂ ಹಣ ಕಾಸು ಕಿತ್ತುಕೊಂಡಿತು.

ಗೊತ್ತಾಗಿದ್ದ ಹೊತ್ತಿಗೆ ಸರಿಯಾಗಿ ಕಿವಿ ವಿಚಾರಣೆಯನ್ನಾರಂಭಿಸಿತು. ನ್ಯಾಯವಾದಿಯಾದ ನಾಲಗೆ ಗಂಭೀರವಾಗಿ ಮಾತನಾಡತೊಡಗಿ, ಮೂಗಿನ ಪರವಾಗಿ ಹೀಗೆಂದಿತು : " ನ್ಯಾಯಾಧಿಪತಿಗಳೆ, ಲಾಲಿಸಬೇಕು. ಬಹುಕಾಲದಿಂದಲೂ ಸುಲೋಚನವನ್ನು ಮೂಗೇ ಧರಸಿಕೊಂಡಿದೆ. ಇಷ್ಟು ವರ್ಷಗಳ ಅನುಭೋಗದಿಂದ ಸುಲೋಚನ ಮೂಗಿನ ಸ್ವತ್ತೇ ಆಯಿತು. ಮತ್ತು, ಎರಡನೆಯದಾಗಿ (ಸುಲೋಚನವನ್ನು ಮೇಲಕ್ಕೆ ತೋರಿಸಿ) ಸುಲೋಚನದ ಸುತ್ತುಗಟ್ಟು ಮೂಗಿನ ದೂಲದಮೇಲೆ ಸರಿಯಾಗಿ, ಕುದುರೆಯ ' ಜೋಗೀರಿ ' ನಂತೆ, ಕೂತುಕೊಳ್ಳುವಹಾಗೆ ಮಾಡಲ್ಪಟ್ಟಿದೆ. ಆದ್ದರಿಂದ ಅದು ಮೂಗಿಗೋಸ್ಕರವೇ ನಿರ್ಮಾಣವಾಗಿದೆ ಎಂದು ಗೊತ್ತಾಗುತ್ತದೆ. ಮತ್ತು, ಮೂರನೆಯ ಅಂಶವೇನೆಂದರೆ, ಮೂಗು ಒಂದು ವೇಳೆ ಇಲ್ಲದೆಯೋ ಹೋಗಿದ್ದರೆ, ಸುಲೋಚನವನ್ನಿಡುವುದೆಲ್ಲಿ ?—ಇಡುವುದು ಹೇಗೆ ?— ಈ ಮೂರು ಕಾರಣಗಳಿಂದಲೂ ಹೇಳಲಾಗದ ಇತರ ಅನೇಕ ಕಾರಣಗಳಿಂದಲೂ ಸುಲೋಚನ ಮೂಗಿಗೇ ಬಾಧ್ಯಪಟ್ಟಿದೆಯೆಂದು ಚೆನ್ನಾಗಿ ಸ್ಥಿರವಾಗುತ್ತದೆ. "

ಹೀಗೆಂದು ನಾಲಗೆ ಹೇಳಿದ ಬಳಿಕ, ನ್ಯಾಯಾಧಿಪತಿ ತಲೆದೂಗುತ್ತಿರಲು, ನಾಲಗೆ ಕಣ್ಣಿನ ಪರವಾಗಿಯೂ ವಾದಿಸತೊಡಗಿತು. ಆದರೆ ಏನೇನು ಹೇಳಿತೋ ಯಾರಿಗೂ ಕೇಳಿಸಲಿಲ್ಲ ; ನ್ಯಾಯಾಧಿಪತಿಯೂ ಅದನ್ನೊಪ್ಪಲಿಲ್ಲ. ಕಿವಿ ಅನೇಕ ನಿಮಿಷಗಳಕಾಲ ಆಲೋಚನೆಯಲ್ಲಿದ್ದು, ಕಡೆಗೆ ಗಂಭೀರ ಸ್ವರದಿಂದ ಹೀಗೆಂದಿತು :—" ಯಾವಾಗ ಮೂಗು ಕಣ್ಣಡಕವನ್ನು ಧರಿಸಿರುತ್ತದೆಯೋ ಆಗ ಕಣ್ಣು ಅದರ ಪ್ರಯೋಜನವನ್ನು ಪಡೆಯಕೂಡದು,—ಎಂದರೆ ಕಣ್ಣು ಮುಚ್ಚಿಕೊಂಡಿರಬೇಕು. ಇದೇ ತೀರ್ಮಾನ" ಎಂದಿತು.

ಹೇಗಿದೆ ಈ ನ್ಯಾಯ ?

———